(8)




# ಅಚಲ

ಸಂಪುಟ 12 | ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ | ಮಾರ್ಚ್ 1997
ಸಂಚಿಕೆ 1 | ದ್ವೈಮಾಸಿಕ | ಬೆಂಗಳೂರು

ಚಂದಾ ಮತ್ತು ಲೇಖನಗಳನ್ನು ಕಳುಹಿಸುವ ವಿಳಾಸ

ಸಂಪಾದಕರು
ಅಚಲ
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
1ನೇ ಮುಖ್ಯರಸ್ತೆ, 9ನೇ ಕ್ರಾಸ್
ವಿಜಯನಗರ ಎರಡನೇ ಹಂತ,
ಬೆಂಗಳೂರು - 40

ಬೆಲೆ

ಬಿಡಿ ಪ್ರತಿ - 4 ರೂ.
ವಾರ್ಷಿಕ ಚಂದಾ - 25 ರೂ.
ಅಜೀವ ಚಂದಾ - 200 ರೂ.
(ಸಂಸ್ಥೆಗಳಿಗೆ) - 250 ರೂ.

## ಒಳಪುಟಗಳಲ್ಲಿ

ಪ್ರಕಾಶಕರು
ಜಾಗೃತಿ ಮಹಿಳಾ
ಅಧ್ಯಯನ ಕೇಂದ್ರ
ಬೆಂಗಳೂರು

ವಿಮರ್ಶೆಗಾಗಿ ಪುಸ್ತಕಗಳನ್ನು ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10/= ಬ್ಯಾಂಕ್ ಕಮಿಷನ್ ಸೇರಿಸಿ ಕಳುಹಿಸಬೇಕು

ಎಂ.ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸ ಬೇಕು

ಬದಲಾದ ವಿಳಾಸಗಳನ್ನು ದಯವಿಟ್ಟು ಬರೆದು ತಿಳಿಸಿ.

## Statement about ownership and other particulars about Newspaper ACHALA

### FORM IV (see Rule 8)

| | | | |
|---|---|---|---|
| 1. | Place of Publication | : | Bangalore, Karnataka State |
| 2. | Periodicity of Publication | : | Bi-monthly |
| 3. | Printers Name Address | : | Akshara Printers, 54/4, Police Station Road, Basavanagudi, Bangalore - 560 004. |
| 4. | Publishers Name | : | Dr. G. Ramakrishna for Jagruthi Mahila Adhyayana Kendra, Bangalore |
| | Nationality | : | Indian |
| | Address | : | 713, Vijaya Mansion, I Main, R.P.C. Layout, Bangalore - 560 070. |
| 5. | Editors Name | : | N. Gayathri |
| | Nationality | : | Indian |
| | Address | : | 713, Vijaya Mansion, I Main, R.P.C. Layout, Bangalore - 560 040. |
| 6. | Name & Address of individuals who own the News Paper | : | Jagruthi Mahila Adhyayana Kendra 713, Vijaya Mansion, I Main, R.P.C. Layout, Bangalore - 560 040. |

I, Dr. G. Ramakrishna, hereby declare that the particulars given above are true to the best of my knowledge and belief.

Bangalore
Date : 1.3.97

Sd/-
**Dr. G. Ramakrishna**

# ರಾಜಕೀಯ ಸಮಾನತೆಗಾಗಿ ಹೋರಾಟ

ಇಂದಿಗೆ ಸುಮಾರು ತೊಂಬತ್ತು ವರ್ಷಗಳ ಹಿಂದೆ 1907ರಂದು ನ್ಯೂಯಾರ್ಕಿನ ಸಿದ್ಧ ಉಡುಪುಗಳ ಕಾರ್ಖಾನೆಯ ಮಹಿಳೆಯರು ತಮ್ಮ ದುಡಿಯುವ ಹಕ್ಕಿಗಾಗಿ, ದುಡಿಯುವ ಕ್ಷೇತ್ರದ ಸುಧಾರಣೆಗಾಗಿ ಬೀದಿಗಿಳಿದು ಹೋರಾಟ ನಡೆಸಿದರು. ಈ ಚಾರಿತ್ರಿಕ ದಿನದ ಮಹತ್ವವನ್ನು ಮನಗಂಡ ವಿಶ್ವದ ಮಹಿಳಾ ನಾಯಕಿಯರು ಅದರಲ್ಲೂ ವಿಶೇಷವಾಗಿ ಜರ್ಮನಿಯ ಕ್ಲಾರಾ ಜೆಟ್‌ಕಿನ್‌ಳ ಸಲಹೆಯಂತೆ ವಿಶ್ವ ಮಹಿಳಾ ಸಮ್ಮೇಳನದಲ್ಲಿ ಮಾರ್ಚ್ 8ನ್ನು ಅಂತರರಾಷ್ಟ್ರೀಯ ಮಹಿಳಾ ದಿನವನ್ನಾಗಿ ಆಚರಿಸುವ ನಿರ್ಣಯವನ್ನು 1910ರಲ್ಲಿ ತೆಗೆದುಕೊಳ್ಳಲಾಯಿತು. ಅದರ ಫಲವಾಗಿ 1911ರಿಂದ ಈಚೆಗೆ ಜಗತ್ತಿನಲ್ಲೆಲ್ಲಾ ಮಹಿಳಾ ದಿನ ಆಚರಣೆಗೆ ಬಂದಿದೆ.

'ಗೃಹಲಕ್ಷ್ಮಿ', 'ಗೃಹದೇವತೆ' ಯೆನಿಸಿಕೊಂಡ ಮಹಿಳೆ ಬೀದಿಗಿಳಿದು ಹೋರಾಟದ ಹಾದಿ ಹಿಡಿದದ್ದು, ಪುರುಷಾಧಿಕಾರದ ಭದ್ರಕೋಟೆಗೆ ಲಗ್ಗೆಯಿಟ್ಟ ಕಾರ್ಯವೂ ಹೌದು. ಈ ಶತಮಾನದ ಆದಿಭಾಗದಲ್ಲಿ ಅಂತರರಾಷ್ಟ್ರೀಯ ಮಹಿಳಾದಿನವು ಮತದಾನದ ಹಕ್ಕಿಗಾಗಿ ಹೋರಾಡುತ್ತಿದ್ದ ಮಹಿಳೆಯರಿಂದಾಗಿ ಅತ್ಯಂತ ಪ್ರಾಮುಖ್ಯತೆ ಪಡೆಯಿತು. 1910ರಲ್ಲಿ ಹೊಸದಾಗಿ ಸ್ಥಾಪಿತವಾಗಿದ್ದ ಅಂತರ-ರಾಷ್ಟ್ರೀಯ ಸೋಷಿಯಲಿಸ್ಟ್ ಮಹಿಳಾ ಚಳುವಳಿಯ ನಾಯಕಿಯಾದ ಕ್ಲಾರಾ ಜೆಟ್‌ಕಿನ್ ಅವರು ಎರಡನೇ ಸಮಾವೇಶದಲ್ಲಿ ಮಂಡಿಸಿದ ನಿರ್ಣಯದಲ್ಲಿ "ಮತದಾನದ ಚಳುವಳಿಯಲ್ಲಿ ಯಾವುದೇ ಮಿತಿಯನ್ನುಂಟುಮಾಡುವುದು" ಮಹಿಳೆಯರಿಗೆ ದೊರಕಬೇಕಾಗಿರುವ ರಾಜಕೀಯ ಸಮಾನತೆಯ ಮೂಲಭೂತ ತತ್ವವನ್ನು ಸುಳ್ಳಾಗಿಸುತ್ತದೆ ಮತ್ತು ಅವಮಾನಿಸಿದಂತಾಗುತ್ತದೆ". ಎಂದು ಹೇಳಿದರು. ಅನಂತರ ಮಹಿಳಾ ದಿನದ ಘೋಷಣೆ : "ಸಾರ್ವತ್ರಿಕ ಮತದಾನದ ಹಕ್ಕು" ಎಂದಾಗಿತ್ತು.

ಆರಂಭದ ವರ್ಷಗಳಲ್ಲಿ ಅಮೆರಿಕಾ ನ್ಯೂಜಿಲ್ಯಾಂಡ್, ಫಿನ್‌ಲ್ಯಾಂಡ್, ನ್ಯೂಯಾರ್ಕ್, ಬ್ರಿಟನ್, ಜರ್ಮನಿ- ಎಲ್ಲಾ ರಾಷ್ಟ್ರಗಳಲ್ಲೂ ಮತದಾನದ ಹಕ್ಕಿಗಾಗಿ ಮಹಿಳೆಯರು ನಡೆಸಿದ ಹೋರಾಟಗಳೇ ಮಹಿಳಾ ದಿನದ ಪ್ರಾಮುಖ್ಯತೆಯನ್ನು ಪಡೆದವಾದರೂ ನಂತರದ ದಿನಗಳಲ್ಲಿ ಮಹಿಳೆಯ ವಿವಿಧ ಸಮಸ್ಯೆಗಳತ್ತ ಕೇಂದ್ರೀಕರಿಸಲು ಮಹಿಳಾದಿನದ ಆಚರಣೆಯು ಮೀಸಲಾಗಿತ್ತು. 1984ರಲ್ಲಿ ಥೈಲ್ಯಾಂಡಿನಲ್ಲಿ ಮಹಿಳೆಯರು Anti Trafficking Woman ಸಪ್ತಾಹ ಪ್ರಚಾರ ದಿನವನ್ನಾಗಿ ಆಚರಿಸಿದರು. ಇದು ಆ ದೇಶದ ಮಹಿಳೆಯರ ಬೃಹತ್ ಸಮಸ್ಯೆಯತ್ತ ಗಮನ ಕೇಂದ್ರೀಕರಿಸುತ್ತದೆ. 1986ರ ಮಾರ್ಚ್ 8ರಂದು ಮನಿಲಾದಲ್ಲಿ ಎಪ್ಪತ್ತು ಗುಂಪುಗಳಿಗೆ ಸೇರಿದ ಸಾವಿರಾರು ಫಿಲಿಪಿನ್ ಮಹಿಳೆಯರು ನಡೆಸಿದ ಮಹಿಳಾ ದಿನದ ಘೋಷಣೆ : "ಮಹಿಳೆಯರು ಸ್ವತಂತ್ರರಾಗದಿದ್ದರೆ ಆ ದೇಶವು ಸ್ವತಂತ್ರ ದೇಶವಲ್ಲ" ಎಂದಿತ್ತು.

1920ರಲ್ಲಿ ಮಾರ್ಗರೇಟ್ ಸಾಂಗರ್ ಮಹಿಳಾದಿನದ ತೊಟ್ಟಿಲಾದ ನ್ಯೂಯಾರ್ಕ್‌ನಲ್ಲಿ ಹೀಗೆ ನುಡಿದಿದ್ದಳು; "ನಮ್ಮ ಆಸಕ್ತಿಯೆಲ್ಲವೂ ಮಹಿಳೆಯರನ್ನು ಸ್ವತಂತ್ರಗೊಳಿಸುವುದರಲ್ಲಿಯೇ ಹೊರತು ಸರಕಾರದ ಅಧಿಕಾರದತ್ತಲ್ಲ." ಆದರೆ ಇಂದು ವಿಶ್ವದ ಮಹಿಳೆಯರು ಈ ಘೋಷಣೆಯಾಚೆಗೂ ಬೆಳೆದಿದ್ದಾರೆ. ಪುರುಷಾಧಿಕಾರದ ಎಲ್ಲ ನೆಲೆಗಳನ್ನು ಪ್ರಶ್ನಿಸುತ್ತಾ ಮುಂದೆ ಸಾಗಿದ್ದಾರೆ. ಅದರ ಫಲಿತವನ್ನು ಭಾರತದ ಮಹಿಳಾ ಹೋರಾಟದಲ್ಲೂ ನೋಡಬಹುದು.

ಇಂದು ಭಾರತದ ರಾಜಕೀಯ ಭೂಪಟದಲ್ಲಿ ಮಹಿಳೆಯರು ಪ್ರಧಾನಮಂತ್ರಿ, ಮುಖ್ಯಮಂತ್ರಿ, ಸಂಪುಟ ಮಂತ್ರಿಗಳಾಗಿ ಮತ್ತು ರಾಜ್ಯಪಾಲರಾಗಿ ಅಧಿಕಾರದ ಅನುಭವ ಪಡೆದಿದ್ದಾರೆ. ಆದರೆ ಜನಸಾಮಾನ್ಯ ಮಹಿಳೆಗೆ ರಾಜಕೀಯ ಪ್ರವೇಶ ಅಷ್ಟೊಂದು ಸುಲಭವಿದೆಯೇ? ಪಂಚಾಯತ್‌ರಾಜ್ ಚುನಾವಣೆಗಳಲ್ಲಿ ದೊರಕಿದ ಮೂರನೇ ಒಂದು ಸ್ಥಾನದ ಮೀಸಲಾತಿಯಿಂದಾಗಿ ಅಪಾರ ಸಂಖ್ಯೆಯ ಮಹಿಳೆಯರು ಅಧಿಕಾರದ ಚುಕ್ಕಾಣಿ ಹಿಡಿದದ್ದನ್ನು ಹಲವಾರು ರಾಜ್ಯಗಳಲ್ಲಿ ನಾವು ಕಾಣುತ್ತೇವೆ. ಅಧಿಕಾರ ಪಡೆಯುವಲ್ಲಿ ಮಹಿಳೆಯರು ಭಾಗವಹಿಸುವ ಪ್ರಕ್ರಿಯೆಗೆ ಸಿಕ್ಕ ಚಾಲನೆಯಾಗಿ ಇದು ಮಹತ್ವದ ಘಟನಯೇನೋ ಹೌದು. ಪಂಚಾಯ್ತಿ ರಾಜ್ಯ ವ್ಯವಸ್ಥೆಯಲ್ಲಿ ಮಹಿಳೆಯ ಮೀಸಲಾತಿ ಬಗ್ಗೆ ಇಂತಹ ನಿರ್ಧಾರ ತೆಗೆದುಕೊಳ್ಳಲು ಆಧಾರವಾದ ತತ್ವದ ಧ್ಯೇಯೋದ್ದೇಶ ಎಲ್ಲರೂ ಒಪ್ಪಬೇಕಾದಂತಹುದು. ಇದರಿಂದ ಆಡಳಿತದ ಎಲ್ಲ ಸ್ತರಗಳಲ್ಲಿ ವಿಶೇಷವಾದ ಸ್ತ್ರೀಕೇಂದ್ರಿತ ತಿಳುವಳಿಕೆಯ ಅಗತ್ಯತೆಯ ವಾಸ್ತವಾಂಶವನ್ನು ಒಪ್ಪಬೇಕಾದ ಮನೋನಿರ್ಣಯವನ್ನು ಮಾಡಲಾಗಿದೆ. ಈವರೆಗೆ ಮಹಿಳೆಯರ ಮೂಲಭೂತ ಅವಶ್ಯಕತೆಗಳಿಗೆ ಮತ್ತು ಕಾಳಜಿಗಳಿಗೆ ಹೆಚ್ಚಿನ ಗಮನ ನೀಡಿಲ್ಲದ್ದರ ಕೊರತೆಯನ್ನು ತುಂಬುವ ಪ್ರಯತ್ನವೂ ಇದಾಗಿದೆ.

ಈಗ ಶಾಸನ ಸಭೆಗಳಲ್ಲಿ ಮಹಿಳೆಯರಿಗೆ ಶೇ.33ರ ಮೀಸಲಾತಿಯನ್ನು ನೀಡಬೇಕೆಂಬ ಮಸೂದೆಯು ಸಂಸತ್ತಿನ ಮುಂದಿದೆ. ಈಗ ಲೋಕಸಭೆಯಲ್ಲಿ ಚುನಾಯಿತರಾಗಿರುವ ಮಹಿಳೆಯರ ಸಂಖ್ಯೆ 36. ಮೀಸಲು ಮಸೂದೆ ಅಂಗೀಕಾರವಾದರೆ ಕನಿಷ್ಠ 180 ಮಹಿಳಾ ಸದಸ್ಯರು ಆಯ್ಕೆಯಾಗುತ್ತಾರೆ. ಪ್ರಮುಖ

ರಾಜಕೀಯ ಪಕ್ಷಗಳೆಲ್ಲಾ ತಮ್ಮ ಚುನಾವಣಾ ಪ್ರಣಾಳಿಕೆಯಲ್ಲಿ ಮಹಿಳಾ ಮೀಸಲಾತಿಯನ್ನು ಒಂದು ಆಶ್ವಾಸನೆಯನ್ನಾಗಿ ಹಾಕಿಕೊಂಡಿದ್ದರೂ ಅದು ಹುಸಿ ಆಶ್ವಾಸನೆಯಾಗಿಯೇ ಉಳಿಯಿತು. ಎಡ ಪಕ್ಷಗಳನ್ನು ಹೊರತುಪಡಿಸಿ ಬೇರೆಲ್ಲಾ ರಾಜಕೀಯ ಪಕ್ಷಗಳು ಈ ಸಂವಿಧಾನದ ತಿದ್ದುಪಡಿಗೆ ಹಿಂದೇಟು ಹಾಕುತ್ತಿವೆ. ಇದನ್ನು ಕುರಿತು ನಡೆಯುತ್ತಿರುವ ಚರ್ಚೆಯಲ್ಲಿ ಕೆಲವು ರಾಜಕೀಯ ಧುರೀಣರು ವ್ಯಕ್ತಪಡಿಸುತ್ತಿರುವ ಅಭಿಪ್ರಾಯಗಳಂತೂ ನಾಚಿಕೆಗೇಡಿನದಾಗಿವೆ. ಮತ್ತು ನಮ್ಮ ಸಂಸ್ಕೃತಿಯ ಭಯಂಕರ ಸತ್ಯಗಳನ್ನು ಬಯಲು ಮಾಡುತ್ತಿವೆ.

ಇತ್ತೀಚೆಗೆ ಚುನಾಯಿತರಾದ ಮತ್ತು ಅಧಿಕಾರದ ರುಚಿ ಕಂಡ ಮಹಿಳೆಯರು ತಮಗೆ ದೊರಕಿದ ಅವಕಾಶಕ್ಕೆ ತಮ್ಮ ಮನೆಯವರ ಬೆಂಬಲ, ಸಹಕಾರವೇ ಕಾರಣವಾದ್ದರಿಂದ ರಾಜಕೀಯ ಸಭೆ, ಕಲಾಪಗಳಲ್ಲಿ ಅವರೂ ಭಾಗವಹಿಸಲು ಅಕಾಶವಿರಬೇಕು ಎಂದಿರು-ವುದು ತೀರಾ ಅವಹೇಳನಕಾರಿಯಷ್ಟೇ ಅಲ್ಲ, ಮೀಸಲಾತಿಯ ಮೂಲಸತ್ವವನ್ನೇ ಅಣಕು ಮಾಡುವಂತಿದೆ. ಮಹಿಳಾ ಮೀಸಲಾತಿಯ ಲಾಭ ಪಡೆದು ತಮ್ಮ ಹೆಂಡತಿ, ಮಗಳ ಮೂಲಕ ತಮ್ಮ ಧ್ವನಿಯನ್ನು ಪುರುಷರು ಎತ್ತುವ ಹಲವಾರು ಪ್ರಕರಣಗಳು ನಮ್ಮ ಮುಂದೆ ಜೀವಂತವಾಗಿ ಇರುವಾಗ ಮಹಿಳೆಯರು ಸ್ವತಃ ತಮ್ಮ ಪುರುಷರಿಗೆ ಮಣೆ ಹಾಸುವುದು ಈ ಪದ್ಧತಿಯನ್ನು ಮುಂದುವರಿಸಿದಂತೆ ಆಗುವುದಿಲ್ಲವೇ? ಮಹಿಳೆಯರು ಸ್ವತಂತ್ರ ವ್ಯಕ್ತಿತ್ವವಾಗಿ ರೂಪುಗೊಳ್ಳುವವರೆಗೂ ಇಂತಹ ಸಮಸ್ಯೆಗಳು ಇದ್ದೇ ಇರುತ್ತವೆ. ಆದ್ದರಿಂದ ಮಹಿಳಾ ಮೀಸಲಾತಿಗಾಗಿ ಹೋರಾಟವೆಂದರೆ ಸ್ವತಂತ್ರ ವ್ಯಕ್ತಿತ್ವದ ಮಹಿಳೆಯರ ಸಂಖ್ಯೆಯನ್ನು ಹೆಚ್ಚಿಸುವತ್ತ ಜಾಗೃತಿಯ ಹೋರಾಟವೂ ಹೌದು. ಮೀಸಲಾತಿ ಮಸೂದೆ ಒಪ್ಪಿ ಜಾರಿಯಾದರೂ ಈ ಹೋರಾಟ ನಿಲ್ಲದೇ ಅರ್ಹ ಮಹಿಳೆಯರನ್ನು ರೂಪಿಸಬೇಕಾದ ಹಿರಿಯ ಜವಾಬ್ದಾರಿಯೊಂದಿಗೆ ಇದು ಮುಂದೆ ನಿರಂತರವಾಗಿ ಸಾಗಬೇಕಾಗುತ್ತದೆ.

ಇನ್ನು ಈ ದಿಕ್ಕಿನತ್ತ ರಾಜಕೀಯ ಪಕ್ಷಗಳ ಜವಾಬ್ದಾರಿಯೇನೂ ಕಡಿಮೆಯಿಲ್ಲ. ಮೀಸಲು ಮಸೂದೆಯನ್ನು ಬೆಂಬಲಿಸಿರುವ ಮತ್ತು ಮುಂದೆ ಬೆಂಬಲಿಸಬಹುದಾದ ಎಲ್ಲ ರಾಜಕೀಯ ಪಕ್ಷಗಳೂ ತಮ್ಮ ತಮ್ಮ ಪಕ್ಷಗಳೊಳಗೆ ಮಹಿಳೆಯರಿಗೆ ಎಷ್ಟರ ಮಟ್ಟಿಗಿನ ಪ್ರಾತಿನಿಧ್ಯ ಕೊಟ್ಟಿವೆ ಎಂಬ ಆತ್ಮಶೋಧನೆಯ ಪ್ರಶ್ನೆ ಹಾಕಿಕೊಳ್ಳಬೇಕು. ಪಕ್ಷಗಳು ರಾಜಕೀಯ ಪ್ರಾತಿನಿಧ್ಯವನ್ನು ಕೊಡದೆ ನಾಯಕಿಯರನ್ನು ರೂಪಿಸಲು ಅಸಮರ್ಥವಾದಲ್ಲಿ, ದಿಡೀರನೆ ಚುನಾವಣೆಗಳಿಗೆ ಮಾತ್ರ ಮಹಿಳಾ ಅಭ್ಯರ್ಥಿಯ ಹುಡುಕಾಟ ನಡೆಸಿ ಯಾರನ್ನೋ ನಾಮಮಾತ್ರವಾಗಿ ನಿಲ್ಲಿಸಿದರೆ ಆಗಲೂ ಅಂತಹ ಅಭ್ಯರ್ಥಿಗಳು ನಿಜವಾದ ಮಹಿಳಾ ಸಮುದಾಯದ ಪ್ರತಿನಿಧಿಯಾಗುವ ಬದಲು, ಆ ರಾಜಕೀಯ ಪಕ್ಷಗಳ ಕೊಂಬುಕಹಳೆಗಳಾಗಬಹುದು. ಎಲ್ಲಾ ರಾಜಕೀಯ ಹೋರಾಟ-ಗಳಲ್ಲೂ ಸಾಮೂಹಿಕ ಹೋರಾಟಗಳಲ್ಲೂ ಮಹಿಳೆಯರು ಭಾಗವಹಿಸದಿದ್ದರೆ ರಾಜಕೀಯ ಜ್ಞಾನವು ಇಲ್ಲವಾಗುತ್ತದೆ. ಆದ್ದರಿಂದ 'ಮೀಸಲಾತಿ'ಯೆನ್ನುವ ಪದಕ್ಕೆ ಗೌರವವನ್ನು ದಕ್ಕಿಸಿಕೊಡಬೇಕಾದರೆ ಮೊದಲಿಗೆ ಮಹಿಳೆಯರು ತಮ್ಮ ಹಕ್ಕು, ಕರ್ತವ್ಯಗಳ ಬಗ್ಗೆ ಜಾಗೃತರಾಗುವುದಷ್ಟೇ ಅಲ್ಲ, ತಮ್ಮ ಸುತ್ತಮುತ್ತಣ ಜಗತ್ತಿನಲ್ಲಿ ಕ್ರಿಯಾಶೀಲರಾಗುವ ಮನೋಭಾವ ಮೂಡಿಸಿಕೊಳ್ಳಬೇಕು. ಇಂತಹ ಧೀರ ಸಂಕಲ್ಪಕ್ಕೆ ಮಹಿಳಾದಿನ ಅರ್ಥಪೂರ್ಣವಾಗಿ ನಾಂದಿ ಹಾಡಲಿ.

-ಎನ್ ಗಾಯತ್ರಿ.

---

ರಾಜಕೀಯ ಅಧಿಕಾರದಲ್ಲಿ ಪ್ರಾತಿನಿಧ್ಯ ಎನ್ನುವುದು ಜನತಂತ್ರದ ನಿರಾಕರಣೆಯೇ ಸರಿ. ಏಕೆಂದರೆ ಇಂಥ ಪ್ರಾತಿನಿಧ್ಯವು ಜನರದ್ದೇ ಆದ ಜನರಿಂದಲೇ ನಡೆಸಲ್ಪಡುವ ಸರ್ಕಾರ ಸ್ಥಾಪಿಸಲು ಎಂದೂ ಸಮರ್ಥವಾಗುವುದಿಲ್ಲ. ತನ್ನ ಅತಿ ಉತ್ತಮ ಸ್ಥಿತಿಯಲ್ಲಿ ಹೆಚ್ಚೆಂದರೆ ಈ ಪ್ರಾತಿನಿಧ್ಯವು 'ಉದಾರವಾದಿ ನಿರಂಕುಶಾಧಿಕಾರ'ವನ್ನು ಮಾತ್ರ ಬೆಳೆಸಬಲ್ಲದು.

ನಾವು ಚಿಕ್ಕ ಚಿಕ್ಕ ಗುಂಪುಗಳಲ್ಲಿ, ಸ್ಥಳೀಯವಾಗಿ ನೇರ ಜನತಂತ್ರವನ್ನು ಜಾರಿಗೆ ತರಬೇಕು. ಮತದಾರರು ಸ್ಥಳೀಯ ಸ್ತರಗಳಲ್ಲಿ 'ಜನತಾ ಸಮಿತಿ'ಗಳನ್ನು ಸಂಘಟಿಸಿಕೊಳ್ಳಬೇಕು. ಸ್ಥಳೀಯ ಗಣರಾಜ್ಯಗಳ ಹಾಗೆ, ತಮ್ಮೊಳಗೆ ನೇರ ಜನತಾಂತ್ರಿಕ ಕಾರ್ಯಾಚರಣೆಯನ್ನು ಇವು ಪಾಲಿಸಬೇಕು. ಈ ತಳಹದಿಯ ಮೇಲೆ ಒಂದು ಸಮಗ್ರ ಸಂವಿಧಾನಾತ್ಮಕ ಯೋಜನೆಯನ್ನೂ ನಾವು ದರ್ಶನ ಮಾಡಿಕೊಳ್ಳಬೇಕಾಗಿದೆ. ಈ ಹೊಸ ವಿಕೇಂದ್ರಿತ ಸಮಾಜದಲ್ಲಿ ಪ್ರತಿಯೊಬ್ಬ ಪ್ರಜೆಯಿಂದಲೂ ಸಲಹೆ ಕೇಳಲು ಅವಕಾಶವಿರುತ್ತದೆ. ಈ ಪ್ರಕ್ರಿಯೆಯೇ ನಾಗರಿಕರಿಗೆ ಸ್ವತಃ ಶಿಕ್ಷಣವನ್ನೂ ಒದಗಿಸಬಲ್ಲದು.

-ಎಂ.ಎನ್.ರಾಯ್ ವಿಚಾರಗಳು

# ಬೆಳದಿಂಗಳಿಗೆ ಬಾಡಿದ ಬದುಕು.

ತಾಜಾ ಮಹಲ
ಕಣ್ಣುಗಳ ತುಂಬ
ಮಾಸಿದ ಮಕಮಲ್ಲಿನಷ್ಟು
ಮಿಂಚು.
ಅಂಗಳದ ತುಂಬ
ಪ್ರೇತಗಳ ನೃತ್ಯ ವೈಭವ.
ಹುಲ್ಲುಗಾವಲಿನಲ್ಲಿ ಹುದುಗಿ
ಹೋದ ಗಂಟಲಿಗೊಂದೊಂದು
ಬಣ್ಣ ಬಣ್ಣದ ಹೂವು.
ಭವ್ಯತೆಯ 'ನಕ್ಷೆ' ಬರೆದವನ
'ಚಟ್ಟ' ಸಿಂಗರಿಸಿದ್ದೇ
ನಗುವ ತುಟಿಗಳ ಪಟ್ಟವೇರಿದ
ಕುದುರೆ ಲಾಳದ ಕಣ್ಣವರು.
ಇಷ್ಟಕ್ಕೂ.... ಆ ಹರೆಯದಲಿ
ಹೇಗೆ ಹರಿದಾಡಿರ ಬಹುದು... ಖುಷಿಯಲ್ಲಿ
ಆ.... ಮಹಾರಾಣಿ.

★ ★ ★

ಹೊತ್ತು ತಂದ ಕುದುರೆ ದೂರವೇ ಉಳಿದಿತ್ತು,
ಬೆನ್ನ ಹಿಂದೆ.
ಬೇಗಂ ಸಾಹಿಬಾ ಕಂಡ ನದಿಯ ಅಲೆ ಅಲೆ
ಎಲ್ಲಾ ಅವಳ ಮನಸಿನ ದುಗುಡ.
ಈಜಾಡಬಲ್ಲೆನೇ ಒಮ್ಮೆಯಾದರೂ
ಯಮುನೆಯ ತುಂಬ.
ಮೇನೆಯಿಂದಿಳಿದು ದೂರ ಓಡಬಲ್ಲೆನೇ
ಹಸಿ ಹಸೀ ಮರಳ ಮೇಲೆ.
ಕುರಿಕಾಯುವ ಹುಡುಗನ ಕೋಲು ಹಿಡಿದು
ಒಮ್ಮೆ ಹಾಡು ಹಾಡಲೇ.
ಬಿಕ್ಕಿ ಬಿಕ್ಕಿ ಅತ್ತ ಮಮತಾಜಳ ಮೇಲೆ
ಮಮತೆ ಬೀರಿದ್ದು
ಅಮವಾಸ್ಯೆಯ ಕಾರಿರುಳು.

ಗಜಸೇನೆ ತುಳಿದಾಡಿದಷ್ಟು ಭಾರದ
ಹೃದಯ ಹಗುರಾದದ್ದೇ... ಅಂದು.
ಒಡೆದ ಬಳೆಯಂತೆ ಚಂದ್ರ ಕಂಡ ಸಂಜೆ
ದುಗುಡಗಳ ಹೊತ್ತರಾಣಿ.... ಬೇಡಿಕೊಂಡಿದ್ದು.
..... ಯಾ ಅಲ್ಲಾಹ್! ಬೆಳದಿಂಗಳು, ಬಿಳೀ ಮಹಲು
ಬಿಳೀ ಕುದುರೆ, ಬೆಳ್ಳಿ ಬಟ್ಟಲ ಹಾಲು
ಎಲ್ಲಾ ಹಾಳಾಗಿ ಬಿಡಲಿ
ಬೇಡ ಮತ್ತೆಂದೂ ನನಗೆ
ಈ ಹುರಿಮೀಸೆಯ ಚೆಲುವನ ಸಹವಾಸ.

★ ★ ★

ಏಕಾಂತದ ರಾತ್ರಿ
ಎದೆಗವಚಿ ಕೇಳಿದ ಪ್ರಿಯಕರ
''ಹೇಳು ಮೇರಿ ಜಾನ್
ನಿನಗೆಂತಹ ಅರಮನೆ ಬೇಕು?''
ಕಲ್ಲು ಕುಟಿಗರ ಕೂಸು, ಮರುಕು ಗುಡಿಸಲ ತುಂಬ
ಕುಪ್ಪಳಿಸಿ ಕುಣಿದದ್ದು ಕಂಡಿದ್ದಳಾಕೆ.
ಕೋಟೆಯ ಬಾಗಿಲಿನಷ್ಟು ಭದ್ರವಾಗಿದ್ದ
ತುಟಿಗಳು... ಕದಲಲೇ ಇಲ್ಲ.
ನನಗೆಗೊತ್ತು ಪ್ರಿಯೆ ನಿನ್ನ ಬಯಕೆ
ನಿನಗೆಂದೇ
''ಜನ್ನತ್''ನದೊಂದು ಭಾಗ ಧರೆಗಿಳಿಸಲಿದ್ದೇನೆ
ಆಕೆಯ ಸಾವಿನ ಸ್ಮಾರಕದ
ಸೂಚನೆಯಾಗಿತ್ತದು.

★ ★ ★

ನವಿರು ಹಾಸಿಗೆಯ ನಿದ್ದೆಯಿಂದೆದ್ದು
ಚಿಟ್ಟನೆ ಚೀರಿದಳು ರಾಜಕುಮಾರಿ.
ಕನಸಿನೊಳಗೆ ಕಂಡ ಹಗಲು
ಅವಳ ಸುತ್ತಾ

ಬರೀ ಕೆನ್ನಾಲಗೆ, ಕೆಂಧೂಳು... ಅಗ್ನಿಪ್ರವಾಹವಿತ್ತು.
ಯಮುನೆಯ ತುಂಬಾ ರಕ್ತದ ಭರತವಿತ್ತು.
ಅರಮನೆಯ ತುಂಬಾ ರುಂಡಗಳ ಶೃಂಗಾರವಿತ್ತು.
ನೆಲಮುಗಿಲುಗಳೇ ಇರಲಿಲ್ಲ, ಸಾಮ್ರಾಜ್ಯದಲ್ಲಿ
ಕಪ್ಪುಹೊಗೆ, ಕರೀ ಮೋಡ,
ಕಸೆ ಮಾಂಸದ ದಿನ್ನೆಗಳು, ಎಲುಬುಗಳ ಕಾಡು.

★ ★ ★

ಚಂಗನೆದ್ದು ಚಿಗರೆಯಂತೆ, ಸಂತೈಸಿದ ಚಕ್ರವರ್ತಿ
ಯಾಕೆ! ಮಧ್ಯರಾತ್ರಿಯಲಿ ಧಿಗ್ಗನೆದ್ದೆ ಅರಸಿ.
ಕೆಟ್ಟ ಕನಸೇನಾದರೂ ಅಟ್ಟಿಕೊಂಡು ಬಂತೇ...
''ತೆಪ್ಪಗಿರು''! ಅರಚಿದಳು ಸಾಮ್ರಾಜ್ಞಿ
ಮುಟ್ಟದಿರು ನನ್ನನ್ನ
ವಿಷದ ಬಾಕುವಿನ ಉಗುರುಗಳ ರಾಕ್ಷಸ
ಕೋಳಿ ಪಿಳ್ಳೆಗಳ ಹಿಂಡಿಗೆರಗಿದ ಕಾಡುಬೆಕ್ಕೇ
ತೊಲಗು...ತೊಲಗು...ತೊಲಗು
ಬಿಕ್ಕಿದಳು ಸಾಮ್ರಾಜ್ಞಿ ಹುಚ್ಚಿಯಂತೆ.
ದಿನಕ್ಕೆ ನೂರು ತಾಸುಗಳಷ್ಟು ವಿರಹದಿಂದ
ಹಲುಬಿದ...ಸಾಮ್ರಾಟ
ಹಕೀಮರೇ..ಹೇಗಿದ್ದಾಳೆ ನನ್ನೆದೆಯ ಅಧಿದೇವತೆ
ಎದ್ದಳೇ...ಕಣ್ತೆರೆದಳೇ...ಮಿಸುಕಾಡಿತೇ ನಾಲಿಗೆ
ಹೇಳಿ...ಯಾವ ಜಗದ ಗವಿ, ಗಹ್ವರದಿಂದ ತರಲಿ
ಅವಳ ನರಗಳಿಗೌಷಧ.
ಹಕೀಮರ ಗಡ್ಡದ ಒಂದೊಂದು ಕೂದಲೂ
ನಿಶ್ಚಲವಿತ್ತು, ಅಸಹಾಯಕತೆಗೆ.
ಇರುವೆಗಳೂ ಕದಲಲಿಲ್ಲ ಅವನ ಹೆಜ್ಜೆಯ
ದೀನತೆಗೆ ಹೆದರಿ.
ಎದೆಗುಂದಿದವು ಅರಮನೆಯ ಕಮಾನುಗಳು
ಮುಂದಿಯ ಪರಿಣಾಮಕ್ಕೆ, ಕಂಪಿಸಿ
ಕಬ್ಬಿಣ ಕವಾಟದೊಳಗಿನ ಸುದ್ದಿ
ಪ್ರಾಣವಾಯುವಿಗೂ ತಿಳಿಯ ಬಾರದ ಕಟ್ಟಾಜ್ಞೆ-
ಅದರೂ ನೆಲದೊಂದೊಂದು
ಹುಲ್ಲಗರಿಕೆಯೂ ಬಲ್ಲ ಸಮಾಚಾರ
ಎಲ್ಲೆಲ್ಲೂ ಗೂಢಚಾರ ಭಲ್ಲೆತಿವಿದರೂ
ಬಾಯಿ ಬಿಡದಷ್ಟು ಬಿಗಿತ.

★ ★ ★

ಅದೇಕೋ...ಹಕ್ಕಿ ಹೃದಯದ ಹೆಣ್ಣು
ಕಣ್ಣು ತೆರೆದಳು ಕೊನೆಯ ಬಾರಿ.
ಆಕೆ ಕಂಡದ್ದು ಇನ್ನಾರಿಗೂ ಕಾಣಿಸಲಿಲ್ಲ
ಸ್ವತಃ ಅವಳ ಕಣ್ಣ ರೆಪ್ಪಗೂ
ಬಿಸಿಲಲ್ಲಿ ಬೆಂದ, ಬಸುರಿಯ ಭಾರಕ್ಕೆ
ತಲೆ ಮೇಲೂ ಬಂಡೆಗಲ್ಲು
ತನ್ನದೇ ಶೃಂಗಾರ ಕೋಣೆಯ ಭದ್ರ ಬುನಾದಿಗೆ.
ಬಳಲಿದ ಬಾಯಿಯ ಬೆಣ್ಣೆ ಕೈಗಳ ಕೂಸು
ಗಾರೆ ಕಲಿಸಿದ್ದು
ತನ್ನದೇ ಜನಾನಾಖಾನದ ಗೋಡೆಗೆ
ಕೂಲಿಯಿಂದಲೇ ಕೂಳು ಕಾಣುವ ಶಿಲ್ಪಿ
ಕೈ ಕತ್ತರಿಸಿಕೊಂಡು ಕೆತ್ತಿದ್ದು
ತನ್ನದೇ ಅಂತಃಪುರದ ಕಮಾನಿನ ನಕ್ಷೆ
ಗುಲಾಬಿ ತೋಟಗಳೆಲ್ಲ ಲೂಟಿಯಾದದ್ದು
ತನಗೇ ಕಂಪು ನೀಡುವ 'ಅತ್ತರ್'ಗೆ.
ನೂರಾರು ಒಂಟೆಗಳು ಮರುಭೂಮಿಯಲಿ
ಅಲೆದು, ತಂದದ್ದು...ತನ್ನದೇ
ಅಲಂಕಾರಕ್ಕೆ ತೆಳು ಪೊರೆಯದಾವಣಿ.
ಸಾವಿರಾರು ಸೈನಿಕರು ಸಮರದಲ್ಲಿ ಸತ್ತದ್ದು
ತನ್ನ ಹೊನ್ನ ಕಿರೀಟದ ವಜ್ರ ತುಣುಕಿಗೆ
ಹಿಂಡು ರೈತರು ಭೂಮಿ ಕಳಕೊಂಡದ್ದು
ತನ್ನ ಸಖಿಯರೊಂದಿಗಿನ ಸಂಜೆ ಓಡಾಟಕ್ಕೆ.
ದೃಷ್ಟಿ ಹರಿದಲ್ಲೆಲ್ಲಾ....

★ ★ ★

ಭೂತ, ವರ್ತಮಾನ, ಭವಿಷ್ಯದ ಪ್ರೇತಗಳು.
ಸೇವಕ ಸೈತಾನರ ಆರಾಧ್ಯಾಧಿದೇವತೆ ನಾನು
ಜೀವಗಳು ಬದುಕಿರುವ ತನಕ, ಕರುಳಿಗೆ

ಬರೆ ಇಡುವ ಕಾದ ಸಲಾಕೆ ನಾನು.
ಹಗಲಿರುಳುಗಳ ತುಂಬ, ಅಳು ಬಿತ್ತುವವರ
ಕ್ರೂರ ಕೂರಿಗೆಯ ನಾಲಿಗೆ ನಾನು.
ಹಸಿವಿನಿಂದಳುವ ಪ್ರತಿಕೂಸಿನ
ಅನ್ನದಗಳುಗಳ ಕದ್ದ ಆಳರಸಿ ನಾನು
ಓ.... ಅದೆಷ್ಟು ಪ್ರೀತಿಸುತ್ತಾನೆ ನನ್ನ ಒಡೆಯ
ಪ್ರೇಮದಾ ರಾಜ್ಯದಲಿ ಹೊತ್ತುತ್ತಿರುಗುವ ಗೆಳೆಯ
ಅದೇಕೋ..." ಕಣ್ಣು ಮುಚ್ಚಿದಳು ಕೊನೆಯ ಬಾರಿ
ಹಕ್ಕಿ ಹೃದಯದ ಹೆಣ್ಣು.
ಯಾ ಅಲ್ಲಾಹ್! ಮರು ಜನ್ಮಕ್ಕೆ ನನ್ನನ್ನು
ಬಡ ಭಿಕ್ಷುಕನ ಕೈಯೊಳಗಿನ
ಮುರುಕು ಬಟ್ಟಲ ಮಾಡು.
ಸಮ್ಮತಿಯನಿತ್ತವು, ದಶ ದಿಕ್ಕಿನ ದನಿಗಳು; ಆಮೀನ್.....

-ಬಿ. ಪೀರ್‌ಬಾಷ

## ಬೇಸಿಗೆ

ಧೂಳಿನ ರಥದಲ್ಲಿ
ಉರಿವ ಗೋಳ,
ಸುತ್ತಿ ಸುತ್ತಿ ಮೇಲೆದ್ದ
ತರಗು-ಬೆಂಕಿಯ ಹೊಗೆ,

ಮೊನ್ನೆ ಮೊನ್ನೆ ವರೆಗೆ
ಥಂಡಿಗೆ ಮೈ ಕಾಸಲು
ಪುರಳೆ ಆರಿಸುತ್ತಿದ್ದ
ಹುಡುಗ ಹುಡುಗಿಯರಿಗೆ
ಈಗ ಬರಿ ಮೈಯ ಮೇಲೆ
ಬಿಸಿಲ ಬರೆ

ಗಂಟಲು ನೆನೆಸಲೂ
ಬಾರದ ನೀರು
ಕಣ್ಣಲ್ಲಿ ಸುರಿವ
ವೈಪರೀತ್ಯ.

- ಸುಮಿತ್ರ

## ಸಾಂತ್ವನ

ನೀತಿಗೆಟ್ಟವರು ಅಧಿಕಾರದಲ್ಲಿ,
ನಡತೆಗೆ ಬೆಲೆ ಕೊಟ್ಟವರು ಅನಾಥಪ್ರಜ್ಞೆಯಲ್ಲಿ.
ಲಂಚಕ್ಕೆ ಮೊದಲ ಮಣೆ,
ವಶೀಲಿಬಾಜಿಗೆ ಮರುಕಳಿಸುವ ಮನ್ನಣೆ.
ಅರ್ಹತೆಗೆ ಕಡೆಯ ಸಾಲು.
ಕುಗ್ಗಿರುವ ಸ್ಥಾನ,
ಮುದುರಿರುವ ಮಾನ .

ನೋವು ತುಂಬಿದೆ ಎದೆಯಲ್ಲಿ,
ನಿರಂತರವಾಗಿದೆ ನಿಟ್ಟುಸಿರು,
ಕಣ್ಣೊರೆಸಿಕೊಂಡು ಹೊರಬರುತ್ತೇನೆ.
ಕಿಲಕಿಲ ಸದ್ದಿನಿಂದ ಹಳ್ಳ ಹರಿಯುತ್ತಿದೆ.
ಮನೆಯ ಮುಂದಿನ ಮಾವಿನ ಮರದಲ್ಲಿ
ಕೆಂಪು ಚಿಗುರು ಕಾಣುತ್ತಿದೆ,
ಕೋಗಿಲೆ ಕುಹೂ ಎನ್ನುತ್ತಿದ್ದು,
ಚಿಕ್ಕಮಕ್ಕಳು ಕೇಕೆ ಹಾಕಿ ಕುಣಿಯುತ್ತಿದ್ದಾರೆ.
ಮನಸ್ಸು ತುಂಬಿ ತಲೆಯೆತ್ತುತ್ತೇನೆ.
ಸೂರ್ಯ ಪೂರ್ವದಲ್ಲೇ ಉದಯಿಸಿದ್ದಾನೆ.

ಎದೆ ಹಗುರಾಗುತ್ತದೆ,
ಮುಗುಳ್ನಗೆಯೊಡನೆ
ಒಳಸರಿಯುತ್ತೇನೆ.

- ಡಾ|| ಎಚ್. ಎಸ್. ಸುಜಾತಾ

ಕಾವ್ಯವೇ ಕವಿಯ ತಾತ್ವಿಕತೆ. ಕವಿಯ ವ್ಯಕ್ತಿತ್ವವು ಸಮಾಜವನ್ನು ಅರ್ಥೈಸುತ್ತದೆಯೇ ಅಥವಾ ಸಮಾಜವೇ ಕಾವ್ಯವನ್ನು ಅರ್ಥೈಸುತ್ತದೆಯೇ ಎಂಬ ಪ್ರಶ್ನೆ ಹೊಸದಲ್ಲ. ಕಾವ್ಯದ ವಸ್ತು ಕವಿಯ ತಿಳುವಳಿಕೆ ಬೇರೆ ಬೇರೆಯಲ್ಲ. ಮತ್ತು ಕಾವ್ಯದ ಮಧ್ಯೆ ದಾಹಗೊಂಡ ಸಮಾಜವೊಂದಿರುತ್ತದೆ. ಹಾಗಾಗಿ ಕಾವ್ಯವೆನ್ನುವುದು ಪರಂಪರೆಯಿಂದ ಬೆಸೆದ ಸಾಂಸ್ಕೃತಿಕ ಉತ್ಪನ್ನ, ವಿವಿಧ ಆಯಾಮಗಳ ಸಾಂಸ್ಕೃತಿಕ ಪರಂಪರೆ ಮತ್ತು ಅದಕ್ಕೆ ಮಿಡಿಯುವ ಕವಿಸಂವೇದನೆಯ ಭಾಷಿಕ ಆಕೃತಿಯನ್ನು ಅರಿಯುವುದೇ ಆಗಿದೆ. ಅದು ಕಾವ್ಯ ಒಳಗೊಂಡ ಕವಿಯ ಸಮಾಜದ ಸಾಂಸ್ಕೃತಿಕ ಗ್ರಹಿಕೆಯಾಗಿರುತ್ತದೆ.

-ಪುಸ್ತಕ ಮಾಹಿತಿ.

# ಜಪಾನಿನ 'ಕಬುಕಿ' ಪ್ರವರ್ತಕಿ - ಒಕುನಿ

-ಶಾಂತಾ ನಾಗರಾಜ್

ಜಪಾನಿನ ರಂಗ ಇತಿಹಾಸ ಪ್ರಾರಂಭವಾಗುವುದೇ ಕ್ರಿ.ಶ. 13ನೇ ಶತಮಾನದ ನಂತರ. ಈ ವೇಳೆಗೆ ಭಾರತ, ಗ್ರೀಕ್ ಮತ್ತು ಹತ್ತಿರದಲ್ಲೇ ಇರುವ ಚೀನಾ ದೇಶಗಳ ರಂಗಭೂಮಿಗಳು ಅನೇಕ ಪ್ರಯೋಗಗಳಿಂದಲೂ, ಏಳು ಬೀಳುಗಳಿಂದಲೂ ದೀರ್ಘ ಇತಿಹಾಸವನ್ನೇ ಸೃಷ್ಟಿಸಿದ್ದರೂ ಜಪಾನ್ ಮಾತ್ರ ರಂಗ ಕಲೆಯ ಬಗ್ಗೆ 'ಮೌನ' ತಾಳಿದ್ದು ಸೋಜಿಗ ಆದರೂ ನಿಜ. ಹಾಗೆ ನೋಡಿದರೆ ಜಪಾನಿನ ಲಿಖಿತ ಇತಿಹಾಸ ಪ್ರಾರಂಭವಾಗುವುದೇ ಕ್ರಿ.ಶ. ಏಳನೆಯ ಶತಮಾನದಲ್ಲಾದರೂ ಮುಂದೆ ಆರುನೂರು ವರ್ಷಗಳ ಉದ್ದನೆಯ ಅವಧಿಯಲ್ಲಿ ಪ್ರಮುಖ ರಂಗ ಚಟುವಟಿಕೆಗಳು ಗೋಚರವಾಗದಿರುವುದಕ್ಕೆ ಕಾರಣ ಅಸ್ಥಿರತೆಯಲ್ಲಿದ್ದ ರಾಜಕೀಯ ಸ್ಥಿತಿಗಳು. ಬೌದ್ಧ ಧರ್ಮದ ಪ್ರವೇಶ, ಆಮೇಲೆ ಬಲಗೊಂಡ ಪಾಳೆಯಗಾರಿಕೆಗಳು, ನಂತರ ಉದ್ಭವಿಸಿದ ಸಮುರಾಯ್ ಸೈನ್ಯ ವರ್ಗ ಆನಂತರ ರೂಪುಗೊಂಡ ಝೆನ್ ಬೌದ್ಧ ಧರ್ಮ, ಇವೆಲ್ಲದರ ಫಲವಾಗಿ 16ನೇ ಶತಮಾನದಲ್ಲಿ 'ನೋಹ್' ರಂಗಭೂಮಿ ಸೃಷ್ಟಿಯಾಗುವ ತನಕ ಸರಗಕು, ಡೆಂಗಕು, ಮುಂತಾದ ನೃತ್ಯ ಪ್ರಕಾರವೇ ಪ್ರದರ್ಶನ ಕಲೆಯಾಗಿ ಜಾರಿಯಲ್ಲಿದ್ದುದು.

ನೋಹ್ ರಂಗಭೂಮಿ 16ನೇ ಶತಮಾನದ ಅಂತ್ಯದಲ್ಲಿ ಪ್ರಾರಂಭವಾದರೂ ಬಹುಬೇಗ ನಿರ್ದಿಷ್ಟ ರಂಗರೂಪವನ್ನು ಸಾಧಿಸಿಕೊಂಡು ಅದನ್ನೇ ಪರಿಪೂರ್ಣಗೊಳಿಸಿಕೊಳ್ಳುವುದರತ್ತ ಸಾಗಿತೇ ವಿನಾ ಕಾಲಕಾಲಕ್ಕೆ ಉಂಟಾಗುವ ಜನಾಭಿಪ್ರಾಯಕ್ಕೆ ಮನ್ನಣೆ ಕೊಟ್ಟು ಹೊಸ ಪ್ರಭಾವಗಳನ್ನು ಸ್ವೀಕರಿಸದೆ ಕೆಲವೇ ಕಾಲದಲ್ಲಿ ಏಕತಾನತೆಯ ಕಡೆಗೆ ಸಾಗಿತು. ಇಂಥ ರಂಗ ಭೂಮಿಯನ್ನು ನವೀಕರಿಸುವ ಚೈತನ್ಯ ಮೂಡಿದ್ದು ಒಕುನಿ ಎಂಬ ತರುಣಿಗೆ ಎನ್ನುವುದು ಮುಚ್ಚಿ ಸಮಾಧಿ ಮಾಡಿರುವ ಒಂದು ಐತಿಹಾಸಿಕ ಸತ್ಯ.

1573ರಲ್ಲಿ ಕಲಾಕಾರರ ಮನೆಯಲ್ಲಿ ಒಕುನಿ ಹುಟ್ಟಿದಳು. ಅವಳ ತಂದೆ ನಕಮುರಾ ಸ್ಯಾನ್ಯೆಮನ್ (Nakamura Sanyemon). ಅವನ ಕುಲ ಕಸುಬು ಕಲೆಯೇ ಆಗಿತ್ತು. ಒಕುಮಿಗೆ ಬಾಲ್ಯದಿಂದಲೇ ನೃತ್ಯದ ಬಗ್ಗೆ ಒಲವಿತ್ತು. ತಂದೆಯ ಪ್ರೋತ್ಸಾಹವೂ ಸೇರಿ ಆಕೆ ಶಾಸ್ತ್ರೀಯ ನೃತ್ಯ ಪರಿಣತಿ ಪಡೆದಳು. ಮತ್ತು ತನ್ನ ಬದುಕನ್ನು ನೃತ್ಯ-ನಾಟಕಗಳಿಗಾಗಿಯೇ ಮೀಸಲಿರಿಸಿದಳು. ಇಜೊಮು (Izumo Shrine) ದೇವಾಲಯಗಳು ಜೀರ್ಣಾವಸ್ಥೆಯಲ್ಲಿದ್ದು ಅದರ ಪುನರುತ್ಥಾನಕ್ಕಾಗಿ ಹಣ ಸಂಗ್ರಹಿಸಲು ಸಂಚಾರಿ ಕಲಾವಿದರಲ್ಲಿ ಒಕುನಿ ಮುಖ್ಯ ಪಾತ್ರ ವಹಿಸಿದಳು. ಊರಿಂದ ಊರಿಗೆ ಸಂಚರಿಸುತ್ತಿದ್ದ ಆಕೆಗೆ ಇಂಥ ನೃತ್ಯ ನಾಟಕಗಳಲ್ಲಿ ಹೊಸ ರೂಪಗಳನ್ನು ತಂದು ಜನಸಾಮಾನ್ಯರನ್ನು ತಲುಪುವುದು ತುಂಬ ಮುಖ್ಯವೆಂದು ತೋರುತ್ತಿತ್ತು. ಇಂಥ ಸಮಯದಲ್ಲೇ ಅವಳಲ್ಲಿ 'ಕಬುಕಿ' ಎನ್ನುವ ರಂಗ ಪ್ರಯೋಗದ ರೂಪುರೇಷೆ ಹುಟ್ಟಿಕೊಂಡಿದ್ದು. 'ಕುಬುಕಿ' ಎಂದರೆ ಸ್ಥೂಲವಾಗಿ 'ರಮ್ಯತೆಯ ರೇಖೆಗಳು' ಎಂದು ಹೇಳಬಹುದು. ಇಲ್ಲಿ 'ರಮ್ಯ' ಎನ್ನುವ ಪದಕ್ಕೆ ಮಹತ್ತರವಾದ ಅರ್ಥವಿದೆ. ಈ ರಮ್ಯತೆಗೆ ಪ್ರಚೋದನೆಯೂ ಬಹಳ ಸ್ವಾರಸ್ಯಕರವಾಗಿಯೇ ಇದೆ. 1601ರಲ್ಲಿ ಒಕುನಿ ತನ್ನ ಪ್ರವಾಸ ಕಾಲದಲ್ಲಿಯೇ ಅಂದಿನ ನೋಹ್ ರಂಗ

> **ನಾಟಕ ರಂಗಕ್ಕೆ ಮಹಿಳೆಯರು ಏಕೆ ಏನೂ ಕಾಣಿಕೆ ಸಲ್ಲಿಸಿಲ್ಲ? ಎಂದು ಸಾಮಾನ್ಯವಾಗಿ ಕೇಳಲಾಗುತ್ತದೆ. ಪ್ರಪಂಚದ ವಿವಿಧ ಭಾಗಗಳಲ್ಲಿ ಮಹಿಳೆಯರು ಅಂಥ ಪ್ರಯತ್ನ ಮಾಡಿದ್ದಾರೆ. ಆದರೆ ಪುರುಷ ಪ್ರಧಾನ ಪರಂಪರೆ ಬಹಳಷ್ಟು ಸಲ ಉದಾಸೀನತೆ, ನಿರ್ಲಕ್ಷ ತೋರಿ ಅಂಥ ಯತ್ನಗಳನ್ನು ಒರೆಸಿ ಹಾಕಿದೆ. ಅಂಥ ನಷ್ಟ ಚರಿತೆಯ ಒಂದು ಮಾದರಿ ಇಲ್ಲಿದೆ.**
>
> **-ಸಂಪಾದಕರು.**

ಭೂಮಿಯ ಹಾಸ್ಯನಟನನ್ನು ಸಂಧಿಸಿದಳು. ಆತ ಅಂದಿನ ಜನಪ್ರಿಯ ನಟನಾಗಿದ್ದ. ಒಕುನಿಯ ಮತ್ತು ಆತನ ಜನಪ್ರಿಯತೆ ಕಬುಕಿಯ ಮುಖ್ಯ ಬಂಡವಾಳವಾಯಿತು. ಕಬುಕಿ ಎನ್ನುವ ಹೊಸ ರಂಗ ಸೃಷ್ಟಿಯಲ್ಲಿ ಚುರುಕುತನ ಮತ್ತು ಜೀವಂತಿಕೆಗಳಿಂದ ಕೂಡಿದ ಮೂಕಾಭಿನಯ ಹಾಗೂ ಧಾರ್ಮಿಕ ಶೈಲಿಯ ಮೂಕಾಭಿನಯಗಳ ಹಿತಮಿತವಾದ ಮಿಶ್ರಣವಿತ್ತು. ನೋಹ್‌ನ ಜಡ್ಡುಗಟ್ಟಿದ ವಿಚಾರಗಳಿಗೆಲ್ಲಾ ಚೈತನ್ಯ ಶೀಲತೆಯನ್ನೂ ಜನಪ್ರಿಯ ಮಾದರಿಗಳನ್ನೂ ಸೇರಿಸಲು ಒಕುನಿ ಮತ್ತು ಆತನ ಮಿತ್ರನಿಗೆ ಸತತವಾಗಿ ಎರಡು ವರ್ಷಗಳ ಅವಧಿ ಬೇಕಾಯಿತು. 'ಕಬುಕಿ' ಅವಸರದಲ್ಲಿ ಹೇಗೋ ಹಾಗೆ ಹುಟ್ಟಿದ ಮಾದರಿ ಅಲ್ಲ ಎನ್ನುವುದನ್ನೂ ಗಮನಿಸುವುದು ಅಗತ್ಯ.

1603ರಲ್ಲಿ ಕ್ಯೂಟೋ (Kyoto) ನಗರದ ಕಮೋ (Komo) ನದಿಯ ಒಣ ದಂಡೆಯ ಮೇಲೆ ಕಬುಕಿಯ ಮೊಟ್ಟ ಮೊದಲ ಪ್ರಯೋಗ ಪ್ರದರ್ಶನಗೊಂಡಿತು. ರಂಗ ಇತಿಹಾಸಕಾರ ಸೂಕ್ಷ್ಮವಾಗಿ ಹೀಗೆ ಉದ್ಗರಿಸುತ್ತಾನೆ. ''ಬಹುಶಃ ಈ ಪ್ರಕಾರಕ್ಕೆ ಆಗಲೇ 'ಕಬುಕಿ' ಎನ್ನುವ ಅಭಿದಾನ ಹರ್ಷಿತ ಪ್ರೇಕ್ಷಕರಿಂದ ದೊರಕಿರಬಹುದು.'' ಮೊದಲ ಪ್ರದರ್ಶನದಲ್ಲೇ 'ಕಬುಕಿ' ಜಯಭೇರಿ ಬಾರಿಸಿ ಬಿಟ್ಟಿತು.

ರಾತ್ರಿ ಕಳೆದು ಬೆಳಗಾಗುವುದರ ಒಳಗೆ ಜನಮನದ ಒಳಗೆಲ್ಲಾ ಒಕುನಿ ಋಷಿಯಾಗಿ ಪ್ರತಿಷ್ಠಾಪಿತಳಾಗಿಬಿಟ್ಟಿದ್ದಳು. ಕಬುಕಿ ನಿಧಾನವಾಗಿ ಆದರೆ ನಿಶ್ಚಿತವಾದ ವೇಗದಲ್ಲಿ ಜಪಾನಿನ ತುಂಬ ತನ್ನ ಪ್ರಭೆಯನ್ನು ಹರಡಲು ಪ್ರಾರಂಭಿಸಿತು. ಕೆಲವೇ ಕಾಲದ ನಂತರ ಒಕುನಿಗೆ ಶಾಸ್ತ್ರೀಯ ನಾಟಕಗಳಲ್ಲಿ ಪಳಗಿದ, ಸಮುರಾಯ್ ಗುಂಪಿನ ಅನುಭವಿ ನಟ ನಗೋಯಾ ಸಾಜಾ (Nagoya Sauza) ಎನ್ನುವವನ ಪರಿಚಯವಾಯಿತು. ಹಳತನ್ನು ಹೊಸದು ಮಾಡುವ, ಹೊಸದನ್ನು ಹದವಾಗಿ ಸ್ವೀಕರಿಸುವ ಮನವುಳ್ಳ ಒಕುನಿಗೆ ಈತನ ಗೆಳೆತನ ಮತ್ತಷ್ಟು ಸಾಧ್ಯತೆಗಳನ್ನು ತಂದು ಕೊಟ್ಟಿತು. ಕಬುಕಿಯಲ್ಲಿ ಹೊಸತನಗಳು ಹಸನುಗೊಳ್ಳುತ್ತಾ ಹೋದವು.

ಪ್ರಾರಂಭಿಕ ದೆಸೆಯಲ್ಲಿ ಒಕುನಿಯ ಕಬುಕಿಯಲ್ಲಿ ಎಲ್ಲರೂ ಮಹಿಳೆಯರೇ ಇದ್ದರು. ಪುರುಷ ಪಾತ್ರಗಳನ್ನೂ ಮಹಿಳೆಯರೇ ನಿರ್ವಹಿಸುತ್ತಿದ್ದರು. 'ಕಬುಕಿ' ಒಂದೇ ಬಾರಿಗೆ ಜನಪ್ರಿಯತೆ ಪಡೆಯುವುದಕ್ಕೆ ಇದೇ ಕಾರಣ ಎಂದು ಪುರುಷ ರಂಗ ಇತಿಹಾಸಕಾರರ ಅಂಬೋಣ! 1616ರ ಹೊತ್ತಿಗೆ ಟೋಕಿಯೋ ನಗರ ಒಂದರಲ್ಲೇ ಸರ್ಕಾರದ ಅನುಮತಿ ಪಡೆದ ಏಳು ತಂಡಗಳು ಪ್ರಸಿದ್ಧಿಪಡೆದವು ಎಂದರೆ ಇತಿಹಾಸಕಾರರು ಮತ್ಯಾವ ಕಾರಣವನ್ನು ಹುಡುಕಿಯಾರು.

ಒಕುನಿ ತನ್ನ ಹೊಸ ಗೆಳೆಯನ ಶಾಸ್ತ್ರೀಯ ನಾಟಕಗಳ ಅನುಭವವನ್ನು ಪಡೆದು ಕಬುಕಿಯಲ್ಲಿ ಮತ್ತೊಂದು ಹೊಸ ಆವಿಷ್ಕಾರವನ್ನು ಮಾಡಿದಳು. ಅದು ಅಂದಿಗೂ ಇಂದಿಗೂ ಜಗತ್ತಿನ ರಂಗಭೂಮಿಗೇ ಹೊಸ ಹಾಗೂ ವಿಭಿನ್ನವಾದ ಪ್ರಯೋಗ. ಪುರುಷರು ಮಹಿಳಾ ಪಾತ್ರಗಳನ್ನೂ, ಮಹಿಳೆಯರು ಪುರುಷ ಪಾತ್ರಗಳನ್ನೂ ನಿರ್ವಹಿಸುವ ಹೊಸ ತಂತ್ರ ಹೊಳೆದದ್ದು ಕೇವಲ ಒಕುನಿ ಒಬ್ಬಳಿಗೇ ಎನ್ನುವುದು ರಂಗಚೋದ್ಯ. ಈ ಪ್ರಯೋಗ ಕಬುಕಿಗೆ ಮತ್ತಷ್ಟು ಮೆರಗನ್ನು ನೀಡಿತು. ಇಂಥ ಹೊಸತನಗಳಿಗೆ ಜಪಾನಿನ ರಸಿಕ ಜನ ಹುಚ್ಚೆದ್ದು ಹೋದರು. ತುಂಬಿದ ಗೃಹಗಳಲ್ಲಿ 'ಕಬುಕಿ' ನಾಟಕಗಳು ಪ್ರದರ್ಶನಗೊಳ್ಳುತ್ತಿದ್ದವು. ಕಬುಕಿ ಪ್ರಾರಂಭವಾದ ಒಂದೇ ವರ್ಷದಲ್ಲಿ ಒಕುನಿ ತನ್ನ ಅರೆ ಶಾಶ್ವತ ರಂಗ ಭೂಮಿಯನ್ನು ಸ್ಥಾಪಿಸಿದ್ದಳು. ನಂತರ ಕಾಲಾನುಕ್ರಮದಲ್ಲಿ ಇವುಗಳ ಸಂಖ್ಯೆ ಬೆಳೆಯುತ್ತಾ ಹೋಯಿತು. ಏಕಕಾಲದಲ್ಲಿ ಸಾಮಾನ್ಯ ಜನವನ್ನೂ ಅರಸೊತ್ತಿಗೆಯನ್ನೂ ಮೆಚ್ಚಿಸಿ ಮರುಳು ಮಾಡಿದ ಪ್ರಕಾರ ಎನ್ನುವುದು ಇತಿಹಾಸದಲ್ಲಿ ಅಡಗಿ ಹೋಗಿರುವ ಸತ್ಯ.

'ಕಬುಕಿ' ಜನಪ್ರಿಯತೆಯ ತುತ್ತತುದಿಗೆ ಏರಿದಂತೆಲ್ಲಾ ಸಂಪ್ರದಾಯಸ್ಥರನ್ನು ಬೆಚ್ಚು ಬೀಳಿಸಲಾರಂಭಿಸಿತು. ಅದು ಅರಸೊತ್ತಿಗೆಯ ಒಲವನ್ನೂ ಪಡೆದುಕೊಂಡದ್ದು ಈ ಮಂದಿಗೆ ನುಂಗಲಾರದ ತುತ್ತಾಯಿತು. ಜಗತ್ತಿನ ಎಲ್ಲ ಮೂಲೆಗಳಲ್ಲೂ ಮಹಿಳೆಯನ್ನು ಹಿನ್ನೆಡೆಗೆ ತಳ್ಳಲು ಪುರುಷರು ಬಳಸುವ ಸಾಧನವೊಂದೇ-ಮಹಿಳೆಯರ ಶೀಲವನ್ನು ಶಂಕಿಸುವುದು, ತನ್ಮೂಲಕ ಸಾಮಾಜಿಕವಾಗಿ ಆಕೆಯನ್ನು ಕೆಳ ಹಂತಕ್ಕೆ ತಳ್ಳುವುದು. ಜಪಾನಿನ ಪುರುಷ ಶ್ರೇಷ್ಠರೂ ಮಾಡಿದ್ದೂ ಇದನ್ನೇ. 'ಒಕುನಿಯ ತಂಡದಲ್ಲಿ ವೇಶ್ಯೆಯರಿದ್ದಾರೆ ಮತ್ತು ಯುವ ಜನತೆಯನ್ನು ಅನೈತಿಕತೆಯ ಕಡೆಗೆ ಎಳೆಯುತ್ತಿದ್ದಾರೆ' ಎಂದು ಅಪಪ್ರಚಾರ ಮಾಡಲಾಯಿತು. ಅಷ್ಟೇ ಅಲ್ಲ, ಸಮಾಜದ ನೈತಿಕ ಹೊಣೆಯನ್ನೆಲ್ಲಾ ಹೊತ್ತ ಅರಸೊತ್ತಿಗೆಯನ್ನೂ ಇದೇ ಮಾತುಗಳಿಂದ ನಂಬಿಸಲಾಯಿತು. 1629ರ ಹೊತ್ತಿಗೆ, 26ವರ್ಷಗಳು ಪ್ರಸಾರಗೊಂಡಿದ್ದ, ಸಾಕಷ್ಟು ಜನಮನ್ನಣೆಯನ್ನು ಪಡೆದಿದ್ದ ಕಬುಕಿ ಮಹಿಳಾ ತಂಡಗಳ ಅನುಮತಿಯನ್ನು ರದ್ದು ಮಾಡಲಾಯಿತು. ಪ್ರದರ್ಶನಗಳನ್ನು ನಿಷೇಧಿಸಲಾಯಿತು. ಆದರೆ ಆ ವೇಳೆಗೆ ಕಬುಕಿ ಸಮಾಜದಲ್ಲಿ ಭದ್ರ ಬೇರುಗಳನ್ನು ಇಳಿಸಿಯಾಗಿತ್ತು. ಜನತೆ ಕಬುಕಿಯನ್ನು ಮರೆಯುವುದು ಸಾಧ್ಯವೇ ಇರಲಿಲ್ಲ. ಒಕುನಿ ಮತ್ತು ಅವಳ ತಂಡ ನಿರ್ಮಿಸಿದ ಪ್ರಭಾವ ಅಪಾರವಾಗಿತ್ತು. ಪರಿಣಾಮವಾಗಿ ಇನ್ನೂ ಪ್ರಾಯಕ್ಕೂ ಬಾರದ ಗಂಡು ಹುಡುಗರು ತಂಡ ಕಟ್ಟಿಕೊಂಡು ತಾವೇ ಮಹಿಳೆಯರ ಪಾತ್ರ ವಹಿಸಿಕೊಳ್ಳುತ್ತಾ ಕಬುಕಿಯನ್ನು ಜೀವಂತವಾಗಿರಿಸಿದರು. ಒಕುನಿ ಮತ್ತವಳ ಸದಸ್ಯೆಯರನ್ನು ಹತ್ತಿಕ್ಕಲು ಸಾಧ್ಯವಾದಂತೆ ಕಬುಕಿಯ ಪ್ರಕಾರವನ್ನು ಹತ್ತಿಕ್ಕಲಾಗಲಿಲ್ಲ. ಅಂದಿನ ಸಂಪ್ರದಾಯಸ್ಥರಿಗಾಗಲೀ ಅರಸೊತ್ತಿಗೆಗಾಗಲೀ, ಮಹಿಳೆಯರನ್ನು ನಿಷ್ಕ್ರಿಯಗೊಳಿಸುವುದು ಉದ್ದೇಶವಾಗಿತ್ತೇ ವಿನಾ ಕಬುಕಿ ಪ್ರಕಾರವನ್ನಲ್ಲ. ಆದ್ದರಿಂದಲೇ 19ನೇ ಶತಮಾನದ ಉತ್ತರಾರ್ಧದ ಹೊತ್ತಿಗೆ ಜಪಾನಿಗೆ ನವ್ಯ ಶೈಲಿಯ ನಾಟಕ ಪ್ರಕಾರ ರೂಪುಗೊಳ್ಳುವವರೆಗೆ 'ಕಬುಕಿ' ಬೇರೆ ಬೇರೆ ರೀತಿಯಲ್ಲಿ ವಿಸ್ತಾರಗೊಳ್ಳುತ್ತಾ ಶ್ರೀಮಂತಗೊಳ್ಳುತ್ತಾ ಪ್ರದರ್ಶನಗೊಂಡು ಪ್ರಾಚೀನ ಶಾಸ್ತ್ರೀಯ ಕಲೆಯೆಂಬ ಹೆಗ್ಗಳಿಕೆಯನ್ನೂ ಪಡೆಯಿತು.

ಇಂತಹ ಮಹಾನ್ ಪ್ರಕಾರವನ್ನು ತನ್ನದೇ ಕರ್ತೃತ್ವ ಶಕ್ತಿಯಿಂದ ಪ್ರಾರಂಭಿಸಿದ ಒಕುನಿಯ ಬಗ್ಗೆ ಮಾತ್ರ ಬಹಳ ಕಡಿಮೆ ವಿಷಯಗಳು ರಂಗ ಇತಿಹಾಸದಲ್ಲಿ ಅಲ್ಲಲ್ಲಿ ದಾಖಲಾಗಿದೆ. ಆಕೆ ಪುರುಷ ಪಾತ್ರಗಳನ್ನು ವಹಿಸುತ್ತಿದ್ದುದನ್ನೂ, ಧರ್ಮಾಧಿಕಾರಿ ತೊಡುವಂತಹ ಕಪ್ಪು ರೇಶಿಮೆ ನಿಲುವಂಗಿ ತೊಟ್ಟು ಸೊಂಟದಲ್ಲಿ ಎರಡು ಕತ್ತಿಗಳನ್ನು ಸಿಕ್ಕಿಸಿಕೊಂಡು ಧೀರ ಪುರುಷನಂತೆ ರಂಗದ ಮೇಲೆ ನಡೆದಾಡುತ್ತಿದುದನ್ನೂ ರಂಗ ಇತಿಹಾಸ ಸ್ಮರಿಸುತ್ತದೆ. ಆದರೂ ಒಕುನಿಯ ಜೀವನ ಚಿತ್ರಣ ಸಮಗ್ರವಾಗಿ ಎಲ್ಲಿಯೂ ದೊರೆಯುವುದಿಲ್ಲ. 1614ರಲ್ಲಿ ಒಕುನಿ ನಿಧನಳಾದಾಗ ಅವಳಿಗೆ ಕೇವಲ 41 ವರ್ಷ ವಯಸ್ಸಾಗಿತ್ತು. ಕಬುಕಿ ಆಗ ಉಚ್ಛ್ರಾಯ ಸ್ಥಿತಿಯಲ್ಲಿಯೇ ಇತ್ತು. ಮತ್ತು ನಿಧನದ ನಂತರವೂ 15 ವರ್ಷಗಳು

ಸಶಕ್ತವಾಗಿ ತನ್ನ ಶಾಖೆಗಳನ್ನೂ ಬೆಳೆಸಿಕೊಳ್ಳುತ್ತಾ ಪ್ರಕಾಶಿಸುವಷ್ಟು ಬಲವಾದ ಬುನಾದಿಯನ್ನೂ ಒಕುನಿ ಅದಕ್ಕೆ ನಿರ್ಮಿಸಿದ್ದಳು. 'ವೇಶ್ಯೆಯರು ಅದರಲ್ಲಿ ಸೇರಿದ್ದಾರೆಂದೂ ಅದರಲ್ಲಿ ಅಶ್ಲೀಲ ಸಾಹಿತ್ಯ ಸೇರಿದೆಯೆಂದೂ' ಅಪವಾದ ಬಂದದ್ದು ಒಕುನಿಯ ಮರಣದ ನಂತರವೇ ಆದರೂ ಕೆಲವು ರಂಗ ಇತಿಹಾಸಗಳಲ್ಲಿ ''1603 ರಲ್ಲಿ ಒಕುನಿ ಎಂಬ ಹೆಂಗಸು ಆರಂಭಿಸಿದ ಆಕರ್ಷಕ ಸಾರ್ವಜನಿಕ ನೃತ್ಯಗಳನ್ನೇ ಕಬುಕಿಯ ಮೂಲರೂಪ ಎನ್ನಲಾಗುತ್ತದೆ. ಅಶ್ಲೀಲತೆಯ ಪರಿಧಿಯಲ್ಲಿಯೇ ನಡೆಯುತ್ತಿದ್ದ ಈ ಹೊಸ ರಂಜನೆಯು ಜನಪ್ರಿಯವೂ ಆಯಿತು. ಅದೇ ಕಾರಣಕ್ಕಾಗಿ ಸರ್ಕಾರವು ಈ ಪ್ರದರ್ಶನಗಳಲ್ಲಿ ಹೆಂಗಸರು ಪಾಲ್ಗೊಳ್ಳುವುದನ್ನು ನಿಷೇಧಿಸಿತು. ಆಗ ಎಳೆಯ ಹುಡುಗರ ಕಬುಕಿ ಬಂತು. ಅದೂ ಮತ್ತೆ ಮೊದಲಿನಷ್ಟೇ ಉದ್ರೇಕಕಾರಿ ಜನಪ್ರಿಯತೆಯನ್ನು ಗಳಿಸಿದಾಗ ಸರ್ಕಾರ ಮತ್ತೊಮ್ಮೆ ಅದನ್ನು ಬಹಿಷ್ಕರಿಸಿತು. ಆಗ ಅಂದರೆ 1675ರ ಸುಮಾರಿಗೆ ಹುಟ್ಟಿದ್ದು ವಯಸ್ಕರ ಕಬುಕಿ. ರಂಗ ಇತಿಹಾಸಕಾರರ ಪ್ರಕಾರ, ಕಬುಕಿಯೆಂಬ ಕಲಾ ಪ್ರಕಾರದ ಬೆಳವಣಿಗೆ ಆರಂಭವಾಗುವುದು ಇಲ್ಲಿಂದ'' ಎಂದು ದಾಖಲಾಗಿರುವುದನ್ನು ಪುನರ್‌ವಿಮರ್ಶೆಗೆ ತೊಡಗಿಸಬೇಕಾಗುತ್ತದೆ.

ಏಕೆಂದರೆ ಕೇವಲ ಅಶ್ಲೀಲತೆಯನ್ನೇ ಕಬುಕಿಯ ಹುಟ್ಟಿಗೆ ಒಕುನಿ ಬಳಸಿದ್ದಳೆಂದರೆ, ಅಂತಹ ವ್ಯಾಪಕ ಜನಪ್ರಿಯತೆ ಮತ್ತು ಅರೆ-ಶಾಶ್ವತ ರಂಗಭೂಮಿಗಳ ಸ್ಥಾಪನೆ ಸಾಧ್ಯವಾಗುತ್ತಿರಲಿಲ್ಲ. ಮತ್ತು ಟೋಕಿಯೋ ನಗರದಲ್ಲೇ ಏಳು ತಂಡಗಳಿಗೆ ಸರ್ಕಾರ ಪರವಾನಗಿಯನ್ನೂ ನೀಡುತ್ತಿರಲಿಲ್ಲ. ಅಲ್ಲದೆ ತನ್ನ ಜೀವಿತದ ಮೂವತ್ತು ವರ್ಷಗಳ ವರೆಗೆ ಶರೀನ್‌ನ ಪುನರುತ್ಥಾನಕ್ಕಾಗಿ ಮತ್ತು ಧರ್ಮ ಪ್ರಚಾರಕ್ಕಾಗಿ ನೃತ್ಯ ಮಾಡುತ್ತಿದ್ದ ಒಕುನಿ ಅಶ್ಲೀಲದ ಬುನಾದಿಯ ಮೇಲೆ ರಂಗ ಪ್ರಕಾರ ನಿರ್ಮಿಸಿದಳೆಂದರೆ ನಂಬುವುದು ಅಸಾಧ್ಯ. ಆದರೂ ಒಕುನಿಯ ಮರಣದ ನಂತರ ಆದ ಕಬುಕಿಯಲ್ಲಿನ ಮಾರ್ಪಾಟುಗಳೋ ಅಥವಾ ಪುರುಷರು ತಾವೇ ಕಬುಕಿಯ ದ್ರಷ್ಟಾರರೆಂದು ಇತಿಹಾಸದಲ್ಲಿ ದಾಖಲಿಸುವ ಸಲುವಾಗಿಯೋ ಒಕುನಿಯ ನವನವೀನ ಪ್ರಯತ್ನಗಳನ್ನು ವ್ಯವಸ್ಥಿತವಾಗಿ ಮೂಲೆಗುಂಪಾಗಿಸಲಾಯಿತು ಎನ್ನುವುದು ಮಾತ್ರ ಐತಿಹಾಸಿಕ ಸತ್ಯ.

## - ಅಶ್ಲೀಲತೆ ಪ್ರದರ್ಶನ

ಸಮಾಜದ ನೈತಿಕ ದಾರ್ಢ್ಯವನ್ನು, ನೈತಿಕರಚನೆಯನ್ನು ಶಿಥಿಲಗೊಳಿಸುವ ಉದ್ದೇಶದಿಂದ ಹೊರಟಿರಲಿ, ಇಲ್ಲದಿರಲಿ ಸ್ತ್ರೀದೇಹದ ಯಾವುದೇ ವಿಧವಾದ ಅಶ್ಲೀಲ ಪ್ರದರ್ಶನಕ್ಕೆ ಬಹಿಷ್ಕಾರವನ್ನು ವಿಧಿಸಬೇಕು. ಚಿತ್ರಗಳ ಮೂಲಕ ಈ ರೀತಿ ಅಶ್ಲೀಲತೆಯನ್ನು ಪ್ರದರ್ಶಿಸುವುದರ ವಿರುದ್ಧ ಸುಪ್ರೀಂಕೋರ್ಟ್ ಕಠಿಣವಾದ ನಿಲುವನ್ನು ತಳೆದಿದೆ. ಆದರೆ ಮಾರಾಟದ ಪ್ರಚಾರವಸ್ತುವಾಗಿ, ಸ್ವತಃ ಮಾರಾಟದ ವಸ್ತುವಾಗಿ ಹೆಣ್ಣಿನ ಬಳಕೆಯು ಆಕೆಯ ಮಾನವೀಯ ವ್ಯಕ್ತಿತ್ವಕ್ಕೆ ಅವಮಾನಕಾರಿ, ಆದ್ದರಿಂದ ಅದು ಅಶ್ಲೀಲಕರ ಎಂಬ ಅರಿವು ನಮ್ಮ ಜನರಲ್ಲಿ ಬೆಳೆದಿಲ್ಲ.

ಮಹಿಳೆಯರ ಅಶ್ಲೀಲಕರ ಪ್ರದರ್ಶನದ ಇತ್ತೀಚಿನ ಧೋರಣೆಗಳು ಚಲನಚಿತ್ರಗಳಲ್ಲಿ, ಅವುಗಳ ಜಾಹೀರಾತು ಪೋಸ್ಟರ್‌ಗಳಲ್ಲಿ ಮತ್ತು ದೂರದರ್ಶನದ ಮೂಲಕ ಪ್ರಸಾರವಾಗುತ್ತಿರುವ ಸಿನಿಮಾ ಪ್ರಚಾರ ಕಾರ್ಯಕ್ರಮಗಳಲ್ಲಿ ಕೂಡ ಢಾಳಾಗಿ ಕಾಣಿಸಿಕೊಳ್ಳುತ್ತಿವೆ. ಚಲನಚಿತ್ರ ಪತ್ರಿಕೆಗಳಲ್ಲೂ, ಇತರ ಪತ್ರಿಕೆಗಳಲ್ಲೂ ಪ್ರಕಟವಾಗುತ್ತಿರುವ ಸಿನಿಮಾ ಜಾಹಿರಾತುಗಳಲ್ಲೂ ಯುವ ಜನರ ಮನಸ್ಸಿನ ಮೇಲೆ ತೀಕ್ಷ್ಣಪ್ರಭಾವ ಬೀರುವಂಥ, ಅವರ ಮನಸ್ಸು ಬುದ್ಧಿಗಳ ದಿಕ್ಕುಗೆಡಿಸುವಂಥ ಚಿತ್ರಗಳು ಸಂಸ್ಕೃತಿ, ಶಿಕ್ಷಣಗಳ ಮುಖವಾಡ ಕೂಡ ಧರಿಸಿಕೊಂಡು ಕಾಣಿಸಿಕೊಳ್ಳುತ್ತಿವೆ.

ಚಿತ್ರಗಳ ಮೂಲಕ ಸ್ತ್ರೀದೇಹದ ಅಶ್ಲೀಲಕರ ಪ್ರದರ್ಶನವು ಸಮಾಜದ ನೈತಿಕ ದೃಢತೆಗೆ ಮಾರಕವೆಂದು ಸುಪ್ರೀಂಕೋರ್ಟು 1974ರಷ್ಟು ಹಿಂದೆಯೇ ಇದರ ವಿರುದ್ಧ ತನ್ನ ಕಠಿಣನಿಲುವನ್ನು ಪ್ರಕಟಿಸಿತ್ತು. ಆದರೆ ಕೇವಲ ಸಂವಿಧಾನದ ನಿಯಮಾವಳಿಗಳ ಮೂಲಕ ಅಶ್ಲೀಲಕರ ಅಭಿವ್ಯಕ್ತಿಗಳನ್ನು ನಿಯಂತ್ರಿಸುವುದು ಸಾಧ್ಯವಿಲ್ಲ. ಈ ಕಾನೂನುಗಳು ಆಚರಣೆಗೆ ಬರುವಂತೆ ನ್ಯಾಯಾಂಗದ ಮೇಲೆ ಒತ್ತಡ ಬೀಳಬೇಕು. ದುರದೃಷ್ಟವೆಂದರೆ ಈ ದುಷ್ಟ ಪ್ರಕ್ರಿಯೆಗಳನ್ನು ಹಿಡಿತದಲ್ಲಿಡಲು ಅಥವಾ ಮೊಟಕುಗೊಳಿಸಲು ಬಹಳಷ್ಟು ಸಲ ನ್ಯಾಯವನ್ನು ಒದಗಿಸಿಕೊಡಬೇಕಿದವರೇ ಸಿದ್ಧರಾಗುವುದಿಲ್ಲ. ಈ ಸಂವಿಧಾನಾತ್ಮಕ ಕಾನೂನುಗಳ ಜೊತೆಗೆ, ತೀವ್ರವಾದ ಸಾಮಾಜಿಕ ಜಾಗೃತಿಯೂ ಅತ್ಯಗತ್ಯವಾಗಿ ಬೆಳೆಯಬೇಕು.

# ಉಳ್ಳವರು -ದರಿದ್ರ್ಯರು.

ಥಾಯ್ಲೆಂಡ್ ಮತ್ತು ಫಿಲಿಫೈನ್ಸ್ ದೇಶಗಳಲ್ಲಿ ಲೈಂಗಿಕ ಉದ್ಯಮ ಯಾವುದೇ ಅಡೆತಡೆಯಿಲ್ಲದೇ ಸಾಗುತ್ತಿದೆ. ಇದೇ ಉದ್ದೇಶದಿಂದಲೇ ಇಲ್ಲಿ ಲೈಂಗಿಕ ತೃಷೆ ನೀಗಿಸಿಕೊಳ್ಳಲು ಬರುವ ಪುರುಷ ಪ್ರವಾಸಿಗರು ಮತ್ತು ಅವರು ಆಯ್ಕೆ ಮಾಡಿಕೊಳ್ಳುವ ವೇಶ್ಯೆಯರು- ಇವರ ನಡುವಿನ ಸಂಬಂಧವು ಉಳ್ಳವರು ದರಿದ್ರ್ಯರನ್ನು ಸಂಧಿಸುವ ಅಪರೂಪದ ಸನ್ನಿವೇಶದ ಮೇಲೆ ಬೆಳಕು ಚೆಲ್ಲುತ್ತದೆ.

ಶ್ರೀಮಂತರು ತಮ್ಮ ಕಾರ್ಯ ಸಾಧನೆಗಾಗಿ, ಸುಖ ಸೌಲಭ್ಯಗಳಿಗಾಗಿ ಒಂದು ಹಂತದವರೆಗೆ ಬಡವರನ್ನೇ ಅವಲಂಬಿಸಿರುತ್ತಾರೆ. ಇದು ಜಾಗತಿಕ ಮಟ್ಟದಲ್ಲೂ ನಡೆಯುತ್ತದೆ. ಇದರ ಸ್ಪಷ್ಟ ನಿದರ್ಶನ ಸೆಕ್ಸ್ ಪ್ರವಾಸೋದ್ಯಮ. ಉತ್ತರದ ಶ್ರೀಮಂತ ರಾಷ್ಟ್ರಗಳು ಈ ಶ್ರೀಮಂತ-ಬಡವರ ಸಂಬಂಧದ ದುರಂತತೆಯ ಹಿಂದಿರುವ ವಾಸ್ತವಾಂಶವನ್ನು ಗುರುತಿಸದೆ, ಅದರ ವಿರುದ್ಧ ಕೋನದಿಂದಲೇ ಪರಿಸ್ಥಿತಿಯನ್ನು ನೋಡುತ್ತವೆ. ಮಾನವೀಯ ನೆರವು, 'ಮುಕ್ತ ವ್ಯಾಪಾರಕ್ಕೆ' ಹಾಗೂ ಆರ್ಥಿಕ ಮಾರುಕಟ್ಟೆಗೆ ಉತ್ತೇಜನ ನೀಡಿ ಬಡ ದಕ್ಷಿಣದ "ದೇಶಗಳನ್ನು ಉದ್ಧಾರ ಮಾಡುತ್ತಿದ್ದೇವೆ; ಅವರಿಗೂ ಜಾಗತಿಕ ಮಟ್ಟದ ಆರ್ಥಿಕ ಬೆಳವಣಿಗೆಯ ಪ್ರಯೋಜನಗಳನ್ನು ಒದಗಿಸುತ್ತಿದ್ದೇವೆ ಎಂಬುದು ಉತ್ತರದ ದೇಶಗಳವರ ನಂಬಿಕೆ. ಆದರೆ ಈ ಧೋರಣೆ ಎಂದೂ ಬದಲಾಗದ ಆದರೆ ಒಳಗೇ ಹುದುಗಿರುವ ಅಂತರರಾಷ್ಟ್ರೀಯ ಅಸಮಾನತೆಗಳನ್ನು ಹಾಗೂ ನಮ್ಮ 'ಒಳ್ಳೆಯತನ'ದಲ್ಲಿ ನಮಗಿರುವ 'ಅತಿ ವಿಶ್ವಾಸ'ವನ್ನು ದೃಢಪಡಿಸುತ್ತದೆ.

ಈ ಶ್ರೀಮಂತ ಯುವಕರು ಢಾಕಾದ ಉಡುಪು ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಯುವತಿಯರ ಗೆಳೆತನವನ್ನೇಕೆ ಬಯಸುವುದಿಲ್ಲ? ಅರ್ಧ ಮಿಲಿಯನ್ ಸಂಖ್ಯೆಯಿರುವ ಈ ಮಹಿಳೆಯರ ದುಡಿಮೆಯ ಬೆಲೆ ಕೇವಲ 66 ಅಮೇರಿಕನ್ ಸೆಂಟ್‌ಗಳು. ಶ್ರೀಮಂತ ರಾಷ್ಟ್ರಗಳು ಅನುಭವಿಸುವ ವೈವಿಧ್ಯಮಯ ಉಡುಪುಗಳನ್ನು ಅಗ್ಗದ ಬೆಲೆಗೆ ಒದಗಿಸಿದಂತಹವು. ಆದರೆ ಇವರ ಗೆಳೆತನವಿರಲಿ, ಅವರು ವಾಸಿಸುವ ಕೊಳಚೆ ಪ್ರದೇಶದ ಶೋಚನೀಯತೆಯ ಬಗೆಗೂ ಇವರಿಗೆ ಕಾಳಜಿಯಿಲ್ಲ.

ಕ್ರಿಸ್‌ಮಸ್‌ನ ಮುಂಜಾನೆ ಉಡುಗೊರೆಯಾಗಿ ಬರುವ ಆಟಿಕೆಗಳನ್ನು ಕಂಡು ನಮ್ಮ ಮಕ್ಕಳ ಕಣ್ಣುಗಳು ಆನಂದೋತ್ಸಾಹಗಳಿಂದ ಹೊಳೆಯುತ್ತವೆ. ಆದರೆ ಈ ಆಟಿಕೆಗಳ ಹಿಂದಿನ ಚೀನೀ ಕಾರ್ಮಿಕರ ಹಸ್ತ ಕೌಶಲ್ಯದ ಬಗ್ಗೆ ಯಾರ ಕುತೂಹಲವೂ ಕೆರಳುವುದಿಲ್ಲ. ಅವರು ಕೆಲಸ ಮಾಡುವ ಪರಿಸರ ಎಂಥದಿರಬಹುದು? ಅವರ ಗಳಿಕೆ ಎಷ್ಟಿರಬಹುದು? -ಅವರು ಜೀವನ ಹೇಗೆ ನಡೆಸುತ್ತಾರೆ - ಯಾವ ಒತ್ತಡದ ಸನ್ನಿವೇಶಗಳಲ್ಲಿ ಕೆಲಸಕ್ಕೆ ಸೇರಿಕೊಂಡರೋ - ಇಂತಹವುಗಳ ಬಗ್ಗೆ ಇವರಿಗೆ ಕಾಳಜಿಗಳಿಲ್ಲ.

ಶ್ರೀಮಂತರಿಗೆ ಅಪಾರ ಅನುಕೂಲ-ಸೌಲಭ್ಯ ಸವಲತ್ತುಗಳನ್ನು ಒದಗಿಸುವ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಉತ್ಪಾದಕ ಹಾಗೂ ಗ್ರಾಹಕರ ನಡುವೆ ಒಂದು ದೊಡ್ಡ ಕಂದಕವೇ ಇರುತ್ತದೆ. ಆದರೆ ಲೈಂಗಿಕ ಪ್ರವಾಸೋದ್ಯಮದ ಪರಿಸ್ಥಿತಿಯೇ ಬೇರೆ. ಇಲ್ಲಿ ತಮಗೆ ಸೇವೆ ಸಲ್ಲಿಸುವವರನ್ನು ನೇರವಾಗಿ ಸಂಧಿಸಿ, ಸಂಪರ್ಕಿಸುವ ಅವಕಾಶವಿದೆ. ಆದರೂ ಬೆತ್ತಲಾಗುವ ಈ ಉದ್ಯಮದಲ್ಲಿ ಜನ ಸುಳ್ಳು, ಕಪಟ, ನಟನೆ ಹಾಗೂ ಭ್ರಮೆಗಳ ಚಾದರವನ್ನು ಹೊದ್ದು ಕೊಂಡಿರುತ್ತಾರೆ.

> ಇಂದಿನ ಜಾಗತೀಕರಣದ ವೇಗದ ಓಟದಲ್ಲಿ ಬಲಿಷ್ಠ ದೇಶಗಳು ಪ್ರವಾಸೋದ್ಯಮದ ಹೆಸರಿನಲ್ಲಿ ಹೆಣ್ಣಿನ ದೇಹವನ್ನು ವಿಕ್ರಯ ವಸ್ತುವಾಗಿ ಬೆಳೆಸುತ್ತಿವೆ. ಈ ಹಿನ್ನಲೆಯಲ್ಲಿ Deccan Herald ನಲ್ಲಿ ಪ್ರಕಟವಾದ "The Poor and th၁ previleged" ಎಂಬ ಲೇಖನದ ಸಾರ ಸಂಗ್ರಹ ಇದು.
>
> ಮೂಲ : Jeremy Seabrook
>
> ಸಂಗ್ರಹ : ಎಚ್. ಎನ್. ಗೀತಾ

ಥಾಯ್ಲೆಂಡಿಗೆ ಬರುವ ಅನೇಕ ವಿದೇಶೀ ಪ್ರವಾಸಿಗರಿಗೆ ಇಲ್ಲಿನ ಲೈಂಗಿಕ ಮಾರುಕಟ್ಟೆಯಲ್ಲಿ 'ಥಾಯ್'ಸ್ತ್ರೀಯರೇ ಸಿಕ್ಕಿ ಬಿಟ್ಟರಂತೂ ಏನೋ 'ವಿಶೇಷ'ವಾದದ್ದು ಲಭಿಸಿದಂತೆ. ಈ ಲೈಂಗಿಕ ಕಾರ್ಮಿಕರ ನಗುಮೊಗದ, ಕೋಮಲ ಹಾಗೂ ವಿಧೇಯ ನಡವಳಿಕೆಗಳಿಗೆ ಅವರು ಮಾರು ಹೋಗುತ್ತಾರೆ. ಕಲವರು ಇವರೊಂದಿಗೆ ದೈಹಿಕ ಸಂಪರ್ಕವಲ್ಲದೆ ಭಾವನಾತ್ಮಕ ನಂಟನ್ನೂ ಬೆಳಸಿಕೊಳ್ಳುತ್ತಾರೆ. ದೇಹ ಮಾರುವ ಈ ಮಾರುಕಟ್ಟೆಯ ವ್ಯವಹಾರದಲ್ಲಿ ಥಾಯ್ ಸ್ತ್ರೀಯರು ತೋರುವ ಆತ್ಮೀಯತೆ, ಆದರ - ಒಲವು ಈ ಪ್ರವಾಸಿ ವಿಟರಿಗೆ ಅನುಭವಾತೀತವಾದ ಆನಂದ ತರುವುದಂತೆ; 'ನೈಜ ಪ್ರೇಮ' ಸಿಗುವುದಂತೆ. ಥಾಯ್ಲೆಂಡಿನ ಹೆಣ್ಣುಗಳ ಅನುಭವ ಪಡೆದ ಹೊಸತರಲ್ಲಿ ಅವರನ್ನು ಪ್ರಶಂಸಿಸುತ್ತಾ ತಮ್ಮ ಹೆಂಗಸರನ್ನು ಊರಿಗೆ ಮರಳಿದ ನಂತರ ಹೀಗಳೆಯುತ್ತಾರೆ; ''ನಿಜವಾದ ಹೆಂಗಸರೆಂದರೆ ಆ

ಮಹಿಳೆಯರೇ !'' ''ಪುರುಷನ ಅಗತ್ಯಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡು ಪೂರೈಸಬಲ್ಲರು ಅವರು'' ''ನಾನು ಸ್ನಾನದ ಮನೆಗೆ ಬೆಳಿಗ್ಗೆ ಹೋಗುವ ವೇಳೆಗೆ ಬ್ರೆಷ್‌ನ ಮೇಲೆ ಟೂತ್ ಪೇಷ್ಟ್ ಸಿದ್ಧವಾಗಿ ಕೂತಿರುತ್ತದೆ. -ಇದು ನಿಜವಾಗಿ ಯೋಗಕ್ಷೇಮ ನೋಡಿಕೊಳ್ಳುವ ರೀತಿ'' ಇವು ಪುರುಷ ಪ್ರಧಾನ ಸಮಾಜದ ವಾಡಿಕೆಯ ಮಾತುಗಳು. ಆದರೆ ಈ ಮಾತುಗಳ ಹಿಂದಿರುವ ''ಹೆಣ್ಣು ಪರರ ಲಾಲನೆ ಪೋಷಣೆಗಾಗಿಯೇ, ಭೋಗ ತೃಪ್ತಿಗಾಗಿಯೇ'' ಎಂಬ ಒಳಾರ್ಥ ಮೇಲ್ನೋಟಕ್ಕೆ ಗೋಚರವಾಗದೇ ಇರಬಹುದು.

ಈ ಸ್ತ್ರೀಯರಿಗೆ ಪೂರ್ಣಾಂಕ ಕೊಟ್ಟು ಬಿಡುವ ಗ್ರಾಹಕರಿಗೆ ಅರ್ಥವಾಗದ ವಾಸ್ತವ ಒಂದಿದೆ. ಅದೇನೆಂದರೆ ಈ ಸ್ತ್ರೀಯರು ಕೇವಲ ಮೈ ಮಾರುವ ಕಾರ್ಮಿಕರು. ಅವರಿಗೂ ಅವರವರ ಊರು ಹಳ್ಳಿಗಳಲ್ಲಿ ಮನೆ ಮಠ ಇರುತ್ತದೆ. ಅವರದೇ ಆದ ಕುಟುಂಬವೆಂಬುದಿರುತ್ತದೆ. ಆ ಕುಟುಂಬಕ್ಕೆ ಇವರ ದುಡಿಮೆಯೇ ಆಧಾರ. ಕುಟುಂಬವೆಂದರೆ ಮಕ್ಕಳಿರಬಹುದು; ವಯಸ್ಸಾದ ತಾಯಿ ತಂದೆಯರೇ ಇರಬಹುದು; ಅಣ್ಣ-ತಮ್ಮ, ಅಕ್ಕ-ತಂಗಿಯರಿರಬಹುದು. ಒಟ್ಟಿನಲ್ಲಿ, ತಮ್ಮ ಕುಟುಂಬಗಳನ್ನು ಉಳಿಸಿಕೊಳ್ಳಲಿಕ್ಕಾಗಿ ಈ ಲೈಂಗಿಕ ಕಾರ್ಮಿಕರು ದುಡಿಯುತ್ತಾರೆ. ಅದೊಂದು ಅಸಹಾಯಕರಾಗಿ ಅಪ್ಪಿಕೊಂಡ ದುಡಿಮೆಯ ಜೀವನ. ಇನ್ನು ಅವರ ಗಳಿಕೆಯ ಅವಧಿಯೋ ಅತ್ಯಲ್ಪದ್ದು. ಇಂತಹ ಒತ್ತಡದ ಸಂದರ್ಭಗಳಲ್ಲಿ, ಆ ಸ್ತ್ರೀ ಅನಿವಾರ್ಯವಾಗಿ ಸೂಕ್ತ ನಡುವಳಿಕೆಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಆ ನಡತೆ ಎಷ್ಟು ಸಮರ್ಥವಾಗಿರುತ್ತದೆಯೆಂದರೆ ಅವಳಲ್ಲಿಗೆ ಬರುವಾತ ಆಕೆ ತನ್ನನ್ನೇ ಪ್ರೀತಿಸುತ್ತಿದ್ದಾಳೆ, ಎಂದು ನಂಬುತ್ತಾನೆ. ಈ ಸ್ತ್ರೀಯರ ಪೈಕಿ ಒಬ್ಬಾಕೆ ಹೇಳುತ್ತಾಳೆ: ''ಈ ಪ್ರಪಂಚದಲ್ಲಿ ಅಹಂಕಾರವಿಲ್ಲದಂತಹ ಪುರುಷರೇ ಇಲ್ಲ. ತಮ್ಮಲ್ಲಿ ಏನೇನೂ ಆಕರ್ಷಣೆಯಿಲ್ಲದಿದ್ದರೂ, ತಾನು ಪ್ರೀತಿಸಲು ಯೋಗ್ಯನೇ ಅಲ್ಲವೇ ಎಂದೂ ತಿಳಿಯದ ಮನುಷ್ಯರೇ ಎಲ್ಲ.'' ಅನಿವಾರ್ಯ ಕಾರಣಗಳಿಗಾಗಿ ಈ ವೃತ್ತಿಯಲ್ಲಿರುವ ಮಹಿಳೆಯರು ತಮ್ಮ ಕುಟುಂಬದ ಅಗತ್ಯಗಳಿಗಾಗಿ ಪುರುಷರನ್ನು ಹೆಚ್ಚಿನ ಹಣ ಕೇಳಿದರೆ ಆಗ ಅವರ ನಿಜವಾದ ಬಂಡವಾಳ ಹೊರಬೀಳುತ್ತದೆ. ಆತನಿಗೆ ಆಗ ಭ್ರಮೆ ನಿರಸನವಾಗುತ್ತದೆ. ಅದುವರೆಗೂ ಒಂದು ಬಡ ಕುಟುಂಬಕ್ಕೆ ಸಹಾಯ ಮಾಡುತ್ತಿದ್ದೇನೆ, ಎಂದು ತನ್ನ ಬೆನ್ನು ತಾನೇ ತಟ್ಟಿಕೊಳ್ಳುತ್ತಿದ್ದಾತ ಈಗ ಅಸಮಾಧಾನಗೊಳ್ಳುತ್ತಾನೆ; ಸಿಡಿಮಿಡಿಗೊಳ್ಳುತ್ತಾನೆ. ಅದುವರೆಗೂ ಸೊಬಗಿ, ಬೆಡಗಿ, ಕೋಮಲೆ-ಎಂದೆಲ್ಲಾ ಹೊಗಳಿಸಿಕೊಂಡಿದ್ದ ಮಹಿಳೆ ದಿಢೀರನೇ ಕಪಟಿ, ವಂಚಕಿ, ಸೂಳೆಯಾಗುತ್ತಾಳೆ, ಈ ಸೆಕ್ಸ್ ಉದ್ಯಮ ಎಷ್ಟು ವಿಶಿಷ್ಟವಾದದ್ದೆಂದರೆ, ಇದು ಉತ್ತರ-ದಕ್ಷಿಣದವರ, ಭಾಗ್ಯವಂತ-ಅಭಾಗಿನಿಯರ ನಡುವಿನ ಸಂಬಂಧವನ್ನು ಗೆರೆ ಎಳೆದಂತೆ ಸ್ಪಷ್ಟಗೊಳಿಸುತ್ತದೆ. ಆದರೆ ಈ ದುಃಖಾಂತ ನಾಟಕದಲ್ಲಿ ತಮಗರಿವಿಲ್ಲದೆಯೇ ಪಾತ್ರ ನಿಭಾಯಿಸುವ ನಟರುಗಳಿಗೆ ಇದು ಗೋಚರವಾಗುವುದಿಲ್ಲ- ಅರ್ಥವಾಗುವುದಿಲ್ಲ.

ಮನುಷ್ಯ-ಮನುಷ್ಯನ, ಗಂಡು-ಹೆಣ್ಣಿನ ಸಂಬಂಧದ ಮಾನವೀಯ ಅರ್ಥವನ್ನು ತಿಳಿಯಲಾಗದ, ತಮ್ಮ ಕುಟುಂಬಗಳಲ್ಲಿ ಕಂಡುಕೊಳ್ಳಲಾಗದ ತೃಪ್ತಿಯನ್ನು ವ್ಯಾಪಾರಿ ಜಗತ್ತಿನಲ್ಲಿ ಅರಸಲು ಹೋಗಿ ನಿರಾಶರಾದರೆ ಅದಕ್ಕೆ ಮುಕ್ತಿಯೆಲ್ಲಿ? ಜನರ ಪ್ರಜ್ಞೆಯ ಸ್ತರವನ್ನು ಎತ್ತರಿಸಬಲ್ಲ ದಿಕ್ಕಿನಲ್ಲಿ ಗಮನಾರ್ಹ ಚಳುವಳಿಯು ನಡೆಯಬೇಕಲ್ಲವೇ?

*(ಡೆಕ್ಕನ್ ಹೆರಾಲ್ಡ್ ಕೃಪೆ.)*

---

## ಕಂಬನಿ

ನಾಡಿನ ಹೆಸರಾಂತ ಕಾದಂಬರಿಕಾರ ಶ್ರೀ ಶ್ರೀನಿವಾಸ ಉಡುಪರ ಪುತ್ರಿ ಕಾದಂಬರಿಗಾರ್ತಿ ಶ್ರೀಮತಿ ಭಾರತಿ ರಾಜಾರಾಂರವರು ಇತ್ತೀಚೆಗೆ ನಿಧನರಾದರು. ಆರದ ದೀಪ, ಮುಂಗಾರು ಮೋಡ, ಯಶಸ್ವಿನಿ, ಮಧುಕಿರಣ, ಮಿಡಿದ ಮನ-ಮುಂತಾದ ಕಾದಂಬರಿಗಳನ್ನು ರಚಿಸಿದ್ದ ಭಾರತಿಯವರ ಅಕಾಲ ಮರಣಕ್ಕೆ ಅಚಲ ಕಂಬನಿ ಸೂಚಿಸುತ್ತದೆ.

## ಅಭಿನಂದನೆ.

★ CNN ಟೀವಿಯ ದೆಹಲಿ ಶಾಖೆಯ ಮುಖ್ಯಸ್ಥೆ ಅನಿತಾ ಪ್ರತಾಪ್ ಇತ್ತೀಚೆಗೆ ಅವರೇ ನಿರ್ಮಿಸಿದ 'ಬ್ಯಾಟಲ್ ಫಾರ್ ಆಫ್‌ಘಾನಿಸ್ತಾನ್' ಎಂಬ ಸಾಕ್ಷ್ಯ ಚಿತ್ರಕ್ಕಾಗಿ 1996ರ ಸಾಲಿನ 'ಜಾರ್ಜ್ ಪೋಲ್ಕ್' ಪ್ರಶಸ್ತಿ ವಿಜೇತೆಯಾಗಿದ್ದಾರೆ. ಈ ಪ್ರಶಸ್ತಿ ಪಡೆದ ಮೊದಲ ಭಾರತೀಯಳಾದ ಅನಿತಾಗೆ ಅಚಲದ ಅಭಿನಂದನೆಗಳು.

★ ಪ್ರಸಿದ್ಧ ನೃತ್ಯಗಾರ್ತಿ ಭರತನಾಟ್ಯ ಪ್ರವೀಣೆ ಅನಿತಾ ರತ್ನಂಗೆ 1996ರ ಸಾಲಿನ ನೃತ್ಯ ಚೂಡಾಮಣಿ ಪ್ರಶಸ್ತಿ ಸಂದಿದೆ. ಅಚಲಾದ ಅಭಿನಂದನೆಗಳು.

## ಲೋಕಸಭೆಯಲ್ಲಿ ಮಂಡಿಸಿದ ಮಹಿಳಾ ಮೀಸಲಾತಿ ಕುರಿತ ಮಸೂದೆ.

ಸಂವಿಧಾನದ (81ನೇ ತಿದ್ದುಪಡಿ) ಮಸೂದೆ, 1996 ಭಾರತದ ಸಂವಿಧಾನವನ್ನು ಇನ್ನಷ್ಟು ತಿದ್ದುಪಡಿ ಮಾಡುವ ಒಂದು ಮಸೂದೆ.

ಭಾರತದ ಗಣರಾಜ್ಯದ 47ನೇ ವರ್ಷದಲ್ಲಿ ಪಾರ್ಲಿಮೆಂಟು ಕೆಳಕಂಡಂತೆ ಅಧಿನಿಯಮಿಸುತ್ತದೆ:-

I. 1) ಈ ಅಧಿನಿಯಮವನ್ನು ಸಂವಿಧಾನದ (81ನೇ ತಿದ್ದುಪಡಿ) ಅಧಿನಿಯಮ, 1996 ಎಂದು ಕರೆಯಲಾಗುವುದು.

2) ಕೇಂದ್ರ ಸರ್ಕಾರವು ಅಧಿಕೃತ ರಾಜ್ಯ ಪತ್ರದಲ್ಲಿ ಗೊತ್ತುಪಡಿಸಿದ ದಿನಾಂಕದಂದು ಅದು ಜಾರಿಗೆ ಬರತಕ್ಕದ್ದು.

II. 1) ಸಂವಿಧಾನದ 330 ನೇ ಅನುಚ್ಛೇದದ ನಂತರ ಕೆಳಕಂಡ ಅನುಚ್ಛೇದವನ್ನು ಸೇರಿಸತಕ್ಕದ್ದು-

"330 ಎ (1) ಲೋಕಸಭೆಯಲ್ಲಿ ಮಹಿಳೆಯರಿಗಾಗಿ ಸ್ಥಾನಗಳನ್ನು ಮೀಸಲಾಗಿಡತಕ್ಕದ್ದು.

2) 330 ನೇ ಅನುಚ್ಛೇದದ (2)ನೇ ಖಂಡದಡಿ ಮೀಸಲಿರಿಸಿರುವ ಒಟ್ಟು ಸ್ಥಾನಗಳಲ್ಲಿ 1/3 ಭಾಗಕ್ಕೆ ಕಡಿಮೆ ಇಲ್ಲದಷ್ಟು ಸ್ಥಾನಗಳನ್ನು ಸಂದರ್ಭಕ್ಕೆ ತಕ್ಕಂತೆ, ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳಿಗೆ ಸೇರಿದ ಮಹಿಳೆಯರಿಗಾಗಿ ಮೀಸಲಾಗಿಡತಕ್ಕದ್ದು.

ಪರಂತು, ಸಂದರ್ಭಕ್ಕೆ ತಕ್ಕಂತೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳಗೆ ಒಂದು ರಾಜ್ಯದಲ್ಲಿ ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಮೀಸಲಿರಿಸಿದ ಸ್ಥಾನಗಳ ಸಂಖ್ಯೆಯು ಮೂರಕ್ಕಿಂತ ಕಡಿಮೆ ಇದ್ದಲ್ಲಿ ಆ ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಕ್ಕೆ ಸಂಬಂಧಿಸಿದಂತೆ, ಈ ಖಂಡಗಳಲ್ಲಿರುವುದಾವುದೂ ಅನ್ವಯವಾಗ-ತಕ್ಕದ್ದಲ್ಲ.

3) ಲೋಕಸಭೆಗೆ ಒಂದು ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ನೇರ ಚುನಾವಣೆಯ ಮೂಲಕ ಭರ್ತಿಮಾಡಬೇಕಾದ ಒಟ್ಟು ಸ್ಥಾನಗಳ 1/3 ಭಾಗಕ್ಕೆ ಕಡಿಮೆ ಇಲ್ಲದಷ್ಟು ಸ್ಥಾನಗಳನ್ನು (ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಗಳಿಗೆ ಸೇರಿದ ಮಹಿಳೆಯರಿಗೆ ಮೀಸಲಿರಿಸಿದ ಸ್ಥಾನಗಳನ್ನೂ ಒಳಗೊಂಡು) ಮಹಿಳೆಯರಿಗಾಗಿ ಮೀಸಲಿರಿಸತಕ್ಕದ್ದು ಮತ್ತು ಅಂತಹ ಸ್ಥಾನಗಳನ್ನು ಆ ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಸರದಿಯ ಪ್ರಕಾರ ಬೇರೆ ಬೇರೆ ಮತಕ್ಷೇತ್ರಗಳಿಗೆ ಹಂಚಿಕೆ ಮಾಡಬಹುದು; ಪರಂತು ಒಂದು ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಕ್ಕೆ ಹಂಚಿಕೆಯಾದ ಸ್ಥಾನಗಳು ಮೂರಕ್ಕಿಂತ ಕಡಿಮೆ ಇದ್ದಲ್ಲಿ ಆ ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಕ್ಕೆ ಸಂಬಂಧಿಸಿದಂತೆ ಈ ಖಂಡದಲ್ಲಿರುವುದಾವುದೂ ಅನ್ವಯವಾಗತಕ್ಕದ್ದಲ್ಲ."

III. ಸಂವಿಧಾನದ 332 ನೇ ಅನುಚ್ಛೇದದ ನಂತರ ಕೆಳಕಂಡ ಅನುಚ್ಛೇದವನ್ನು ಸೇರಿಸತಕ್ಕದ್ದು ಆದೆಂದರೆ:-

"332ಎ. (1) ಪ್ರತಿರಾಜ್ಯದ ಶಾಸನ ಸಭೆಯಲ್ಲಿ ಮಹಿಳೆಯರಿಗಾಗಿ ಸ್ಥಾನಗಳನ್ನು ಮೀಸಲಾಗಿರಿಸತಕ್ಕದ್ದು.

2) 332 ನೇ ಅನುಚ್ಛೇದದ (3)ನೇ ಖಂಡದಡಿ ಮೀಸಲಿರಿಸಿರುವ ಒಟ್ಟು ಸ್ಥಾನಗಳಲ್ಲಿ 1/3 ಭಾಗಕ್ಕೆ ಕಡಿಮೆ ಇಲ್ಲದಷ್ಟು ಸಂಖ್ಯೆಯ ಸ್ಥಾನಗಳನ್ನು ಸಂದರ್ಭಕ್ಕೆ ತಕ್ಕಂತೆ, ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಮಹಿಳೆಯರಿಗಾಗಿ ಮೀಸಲಾಗಿಡತಕ್ಕದ್ದು.

ಪರಂತು, ಒಂದು ರಾಜ್ಯದಲ್ಲಿ, ಸಂದರ್ಭಕ್ಕೆ ತಕ್ಕಂತೆ, ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಗಳಿಗಾಗಿ ಮೀಸಲಾಗಿಟ್ಟ ಸ್ಥಾನಗಳ ಸಂಖ್ಯೆಯು ಮೂರಕ್ಕಿಂತ ಕಡಿಮೆ ಇದ್ದಲ್ಲಿ, ಆ ರಾಜ್ಯಕ್ಕೆ ಸಂಬಂಧಿಸಿದಂತೆ ಈ ಖಂಡದಲ್ಲಿರುವುದಾವುದೂ ಅನ್ವಯ-ವಾಗತಕ್ಕದ್ದಲ್ಲ.

(3) ಪ್ರತಿರಾಜ್ಯದ ಶಾಸನ ಸಭೆಯಲ್ಲಿ ನೇರ, ಚುನಾವಣೆಯ ಮೂಲಕ ಭರ್ತಿಮಾಡಬೇಕಾದ ಒಟ್ಟು ಸ್ಥಾನಗಳಲ್ಲಿ 1/3 ಭಾಗಕ್ಕೆ ಕಡಿಮೆಯಿಲ್ಲದಷ್ಟು (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಮಹಿಳೆಯರಿಗಾಗಿ ಮೀಸಲಿರಿಸಿದ ಸ್ಥಾನಗಳನ್ನು ಒಳಗೊಂಡು) ಮಹಿಳೆಯರಿಗಾಗಿ ಮೀಸಲಾಗಿರಿಸತಕ್ಕದ್ದು ಮತ್ತು ಅಂತಹ ಸ್ಥಾನಗಳನ್ನು ಆ ರಾಜ್ಯದ ಬೇರೆ-ಬೇರೆ ಮತ ಕ್ಷೇತ್ರಗಳಿಗೆ ಸರದಿಯ ಮೇಲೆ ಹಂಚಿಕೆ ಮಾಡಬಹುದು.

4) ಈ ಅಧಿನಿಯಮದ ಮೂಲಕ ಸಂವಿಧಾನಕ್ಕೆ ಮಾಡಿದ ತಿದ್ದುಪಡಿಯು, ಈ ಅಧಿನಿಯಮವು ಆರಂಭವಾದಾಗ ಲೋಕಸಭೆ ಅಥವಾ ಒಂದು ರಾಜ್ಯದ ಶಾಸನ ಸಭೆಗಳಲ್ಲಿ ಇದ್ದ ಪ್ರತಿನಿಧಿತ್ವದ ಮೇಲೆ ಆ ಲೋಕ ಸಭೆ ಅಥವಾ ಸಂಧರ್ಭಕ್ಕನುಸಾರ, ಆ ಶಾಸನ ಸಭೆ ವಿಘಟನೆಯಾಗುವವರೆಗೆ, ಪರಿಣಾಮ ಬೀರತಕ್ಕದ್ದಲ್ಲ.

## ಉದ್ದೇಶಗಳು ಮತ್ತು ಕಾರ್ಯಕಾರಣಗಳ ವಿವರಣೆ

1.ಸಂವಿಧಾನದ (73ನೇ ತಿದ್ದುಪಡಿ) ಅಧಿನಿಯಮ 1992 ಮತ್ತು ಸಂವಿಧಾನದ (74ನೇ ತಿದ್ದುಪಡಿ) ಅಧಿನಿಯಮ 1992 ರ ಮೂಲಕ ಅನುಕ್ರಮವಾಗಿ ಸೇರಿಸಲಾಗಿರುವ 243ಡಿ ಮತ್ತು 234ಟಿ. ಅನುಚ್ಛೇದಗಳಲ್ಲಿ ಪ್ರತಿಯೊಂದು ಪಂಚಾಯಿತಿ ಮತ್ತು ಪ್ರತಿಯೊಂದು ನಗರಸಭೆಯಲ್ಲಿ 1/3ಭಾಗಕ್ಕೆ ಕಡಿಮೆಯಿಲ್ಲದಂತೆ ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡತಕ್ಕದ್ದೆಂದು ನಿಬಂಧಿಸಿವೆ. ಅಲ್ಲದೇ, ಮೇಲೆ ಸೂಚಿಸಿರುವ ಅನುಚ್ಛೇದಗಳು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳಿಗೆಂದು ಮೀಸಲಾಗಿಟ್ಟಿರುವ ಸ್ಥಾನಗಳಲ್ಲಿ 1/3ರಷ್ಟು ಸ್ಥಾನವನ್ನು ಸಂದರ್ಭಾನುಸಾರ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ ಮಹಿಳೆಯರಿಗಾಗಿ ಮೀಸಲಿರಿಸತಕ್ಕದ್ದೆಂದು ನಿಬಂಧಿಸಿವೆ. ಮಹಿಳೆಯರಿಗಾಗಿ ಮೀಸಲಿಟ್ಟಿರುವ ಇಂತಹ ಸ್ಥಾನಗಳನ್ನು ಬೇರೆ ಬೇರೆ ಮತ ಕ್ಷೇತ್ರಗಳಿಗೆ ಸರದಿಯ ಪ್ರಕಾರ ಹಂಚಬಹುದೆಂದೂ ಸದರಿ ಅನುಚ್ಛೇದಗಳು ನಿಬಂಧಿಸುತ್ತವೆ.

2. ಪಂಚಾಯಿತಿ ಮತ್ತು ನಗರಸಭೆಗಳಲ್ಲಿ ಮಹಿಳಾ ಮೀಸಲಾತಿಯನ್ನು ಈಗಾಗಲೇ ಕೊಡಲಾಗಿದ್ದು, ಅದೇ ಮಾದರಿಯಲ್ಲಿ ಲೋಕಸಭೆ ಮತ್ತು ರಾಜ್ಯಗಳ ಶಾಸನ ಸಭೆಗಳಲ್ಲೂ ಸಂವಿಧಾನ ತಿದ್ದುಪಡಿಯ ಮೂಲಕ ಮಹಿಳೆಯರಿಗಾಗಿ ಮೀಸಲಾತಿ ಕಲ್ಪಿಸಲು ಉದ್ದೇಶಿಸಲಾಗಿದೆ. ಮುಖ್ಯ ರಾಜಕೀಯ ಪಕ್ಷಗಳೂ ಮಹಿಳೆಯರಿಗೆ ಈ ತೆರನಾದ ಮೀಸಲಾತಿಯನ್ನು ಕಲ್ಪಿಸುವ ಪರವಾಗಿವೆ.

3.ಈ ಮಸೂದೆ ಮೇಲೆ ಹೇಳಿದ ಉದ್ದೇಶವನ್ನು ಸಾಧಿಸಲು ಯತ್ನಿಸುತ್ತದೆ.

ಹೊಸದೆಹಲಿ
4ನೇ ಸೆಪ್ಟಂಬರ್ 1996
ರಮಾಕಾಂತ ಡಿ. ಕಾಲಪ್.

(ಮೀಸಲಾತಿ ಕುರಿತ ಈ ಮಸೂದೆಯನ್ನು ಇಂಗ್ಲೀಪಿನಿಂದ ಕನ್ನಡಕ್ಕೆ ಶ್ರೀಮತಿ ಹೇಮಲತಾ ಮಹಿಷಿ ಅನುವಾದಿಸಿದ್ದಾರೆ.)

---

## ಇಬ್ಬರು ವನವಾಸಿಗಳು.

ದ್ರೌಪದಿಯ ಮತ್ತು ಸೀತೆಯ ವನವಾಸಗಳಲ್ಲಿ 'ವನವಾಸ'ವೆಂಬ ಶಾಬ್ದಿಕ ಸಾಮ್ಯವಿದೆಯೇ ಹೊರತು ಬೇರೆ ಯಾವ ಸಾಮ್ಯವೂ ಇಲ್ಲ. ದ್ರೌಪದಿಯ ವನವಾಸವು ಪತಿಯ ಜೂಜಿನ ಹವ್ಯಾಸದಿಂದ ಪರಿಣಮಿಸಿತು. ವೈರಿಗಳ ಒಳಸಂಚಿನಿಂದ ಜಯ, ಪತಿಯ ವ್ಯಸನಾಧೀನತೆ ಇವೆಲ್ಲವುಗಳ ಪರಿಣಾಮವೆಂದರೆ ಈ ವನವಾಸವಾಗಿತ್ತು. ದ್ಯೂತದಿಂದ ಶಕ್ಯವಾದಲ್ಲಿ ಪಂಚನದಿಗಳ ಪ್ರದೇಶವನ್ನು ಆತನು ಯಾವ ರೀತಿಯಿಂದ ಪಡೆಯುವವನಿದ್ದನೋ ಅದೇ ತಿಳಿಯದು.

ಸೀತೆಯ ವನವಾಸವೆಂದರೆ ರಾಮನ ಧ್ಯೇಯ ಜೀವನದ ಪರಮೋಚ್ಚ ಬಿಂದುವಾಗಿತ್ತು. ಅವನ ವನವಾಸದಿಂದ ತನ್ನ ಮಗನಿಗೆ ರಾಜ್ಯವನ್ನು ಕೊಡಿಸುವ ಕೈಕೇಯಿಯ ಹಂಚಿಕೆಯು ವಿಫಲವಾಯಿತು. ರಾಮನ ರಾಜ್ಯಾಭಿಷೇಕವು ಇನ್ನಷ್ಟು ಭದ್ರವಾಯಿತು.

ವನವಾಸದಲ್ಲಿ (ದ್ರೌಪದಿಗೆ) ಅರಮನೆಯಲ್ಲಿ ದೊರೆಯುವಷ್ಟು ಏಕಾಂತವು ಸಾಧ್ಯವಿರಲಿಲ್ಲ. ಅಷ್ಟೊಂದು ಐಶ್ವರ್ಯವು ಇರದಿದ್ದರೂ, ಬರಹೋಗುವವರು, ಆಶ್ರಿತರ ಓಡಾಟವು ಇದ್ದೇ ಇತ್ತು. ಬರಹೋಗುವ ಋಷಿಗಳ, ಬೇಜಾರು ಹುಟ್ಟಿಸುವ ಕಥೆಗಳನ್ನು ಕೇಳಬೇಕಾಗುತ್ತಿತ್ತು. ಅವಳು ಸದಾ ಖಿನ್ನಳಾಗಿರುತ್ತಿದ್ದಳು. ಎಂಬುದಕ್ಕೆ ಅಲ್ಲಲ್ಲಿ ಅನೇಕ ಉಲ್ಲೇಖಗಳಿವೆ.

ಸೀತೆಯ ವನವಾಸದಲ್ಲಿ ಯಾವ ತರಹದ ವೈರತ್ವವೂ ಇರಲಿಲ್ಲ. ಹನ್ನೆರಡು ವರ್ಷಕ್ಕಿಂತ ಹೆಚ್ಚಿನ ಕಾಲವು ಪ್ರಣಯಾತಿರೇಕದಲ್ಲಿಯೇ ಕಳೆಯಿತು. ಅಯೋಧ್ಯೆಯಲ್ಲಿ ಅವಳು ರಾಣಿಯಾಗುವವಳಿದ್ದಳು... ಅವಮಾನದ ಕೊರಗು ಅಲ್ಲಿ ಇರಲಿಲ್ಲ. ಮಕ್ಕಳ ವಿರಹವಿರಲಿಲ್ಲ. ಅತಿಥಿಗಳ ಗೊಂದಲವಿರಲಿಲ್ಲ. ಇಂತಹ ಸುಂದರವಾದ ಪಿನ್ನಲೆಯಲ್ಲಿ ಸರ್ವಮುಗ್ಧ ಬಾಲಿಕೆಯು ಪ್ರಣಯನಿಯಾಗಿ ರೂಪಗೊಂಡಳು.

-ಇರಾವತಿ ಕರ್ವೆ ('ಯುಗಾಂತರ'ದಲ್ಲಿ)

# ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ



"ನಾವು ಹಳಬರು ಕೇಳಿ" ಬೀದಿ ನಾಟಕದ ಒಂದು ದೃಶ್ಯ

ಮಹಿಳೆಯರು ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಬೀದಿಗಿಳಿದು ಹೋರಾಡಿ ಜಯಗಳಿಸಿದ ನೆನಪನ್ನು ತರುವ ಅಂತರರಾಷ್ಟ್ರೀಯ ಮಹಿಳಾ ದಿನವನ್ನು ಈ ವರ್ಷ ರಾಜಕೀಯ ಸಮಾನತೆಗಾಗಿ ನಡೆಸುವ ಹೋರಾಟದ ದಿನವನ್ನಾಗಿ ಇಡೀ ರಾಷ್ಟ್ರದಲ್ಲೆಲ್ಲಾ ಆಚರಿಸಲಾಯಿತು. ಆಡಳಿತದ ನೀತಿ ನಿಯಮಾವಳಿಗಳನ್ನು ನಿರ್ಧರಿಸುವಲ್ಲಿ, ಪ್ರಭಾವಿಸುವಲ್ಲಿ ಮಹಿಳೆಯರ ಭಾಗವಹಿಸುವಿಕೆಯು ತೀರಾ ಅಗತ್ಯವೆಂಬ ನಂಬಿಕೆಯಿಂದ ಅದಕ್ಕಾಗಿ ಶಾಸನ ಸಭೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ಬೇಕೆಂಬ ವಿಷಯದ ಬಗ್ಗೆ ಜನಜಾಗೃತಿ ಮೂಡಿಸಲು ಹಲವಾರು ಸಂಘ ಸಂಸ್ಥೆ ಹಲವು ಕಾರ್ಯಗಳನ್ನು ಹಮ್ಮಿಕೊಂಡಿದ್ದವು.

ಬೆಂಗಳೂರಿನ ಸುಮಂಗಲಿ ಸೇವಾಶ್ರಮ, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಮತ್ತು ಜನವಾದಿ ಮಹಿಳಾ ಸಂಘಟನೆಗಳು ಒಟ್ಟಾಗಿ ಸೇರಿ ಒಂದು ವಾರದ ಸಾಂಸ್ಕೃತಿಕ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದವು. ಬೆಂಗಳೂರು ನಗರದ ವಿವಿಧ ಬಡಾವಣೆಗಳಲ್ಲಿ ಮಾರ್ಚ್ 3 ರಿಂದ ಮಾರ್ಚ್ 8ರವರೆಗೆ ಸಂಜೆಯ ವೇಳೆಯಲ್ಲಿ ನಡೆದ ಈ ಕಾರ್ಯಕ್ರಮ ಜನಸಾಮಾನ್ಯರಿಗೆ ಮಹಿಳಾ ಮೀಸಲಾತಿಯ ಮಹತ್ವ ಮತ್ತು ಅಗತ್ಯವನ್ನು ತಿಳಿಸಿ ಅಪಾರ ಜನಮೆಚ್ಚುಗೆಯನ್ನು ಪಡೆಯಿತು. ಜಾಗೃತಿಯ ಶ್ರೀಮತಿ ಶಾಂತಾ ನಾಗರಾಜ್ ಬರೆದು ನಿರ್ದೇಶಿಸಿದ '**ನಾವು ಹಳಬರು ಕೇಳಿ ನಾವೆ ಹೊಸ ಪೀಳಿಗೆ**' ನಾಟಕವು ಮಹಿಳಾ ಮೀಸಲಾತಿಯ ಮಹತ್ವ ಮತ್ತು ಅಗತ್ಯತೆಯನ್ನು ಕುರಿತ ನಾಟಕವಾಗಿತ್ತು. ಮೂರೂ ಸಂಘಟನೆಗಳ ಸದಸ್ಯರು ಈ ನಾಟಕದಲ್ಲಿ ಅಭಿನಯಿಸಿದರು. ಹೆಣ್ಣು ಮಕ್ಕಳನ್ನು ಕುರಿತ ಜಾಗೃತಿ ಗೀತೆಗಳು ಹೆಣ್ಣಿನ ಸಮಸ್ಯೆಯ ವಿವಿಧ ಮುಖಗಳತ್ತ ಜನಸಾಮಾನ್ಯರು ಕಣ್ತೆರೆಯುವಂತೆ ಮಾಡಿದವು .

ಮಾರ್ಚ್ 3ರಂದು ಮೈಸೂರು ಬ್ಯಾಂಕ್ ವೃತ್ತದ ಬಳಿ ಪ್ರಸಿದ್ಧ ವಕೀಲರು ಮತ್ತು ಲೇಖಕಿಯೂ ಆಗಿರುವ ಶ್ರೀಮತಿ ಹೇಮಲತಾ ಮಹಿಷಿಯವರಿಂದ ಉದ್ಘಾಟಿಸಲ್ಪಟ್ಟು ಆರಂಭವಾದ ಸಾಂಸ್ಕೃತಿಕ ಕಾರ್ಯಕ್ರಮ ಇಡೀ ವಾರ ವಿವಿಧ ಬಡಾವಣೆಗಳಲ್ಲಿ ಪ್ರದರ್ಶಿತವಾಯಿತು. ಮಾರ್ಚ್ 8 ರಂದು ಪುರಭವನದ ಬಳಿ ನಡೆದ ಸಮಾರೋಪ ಸಮಾರಂಭವು ಶ್ರೀಮತಿ ಎಸ್.ಜಿ. ಸುಶೀಲಮ್ಮನವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಮಾರಂಭದ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶಾಸಕ ಶ್ರೀರಾಂರೆಡ್ಡಿಯವರು ಮಹಿಳಾ ಮೀಸಲಾತಿಗಾಗಿ ಹೋರಾಟದ ಅಗತ್ಯವನ್ನು ಹೇಳಿ ಮಹಿಳೆಯರು ಈ ದಿಕ್ಕಿನತ್ತ ಸಂಘಟಿತರಾಗಬೇಕೆಂದು ಕರೆಯಿತ್ತರು. ಮತ್ತೊಬ್ಬ ಮುಖ್ಯ ಅತಿಥಿ ಶ್ರೀಮತಿ ಹೇಮಲತಾ ಮಹಿಷಿಯವರು ಮಹಿಳಾ ಮೀಸಲಾತಿಗಾಗಿ ನಡೆಸುವ ಹೋರಾಟದಷ್ಟೇ ಸಾಮರ್ಥ್ಯವನ್ನೂ ಬೆಳೆಸಿಕೊಳ್ಳಬೇಕೆಂದು ಕರೆಯಿತ್ತರು.

# ಮಾತೃ ಆರಾಧನೆ: ಒಂದು ಪರಿಚಯ

ಪ್ರಾಚೀನ ಕಾಲದ ಮಾನವನ ಮನದಲ್ಲಿ ಪ್ರಜ್ಞೆಯು ಹುಟ್ಟಿದಾಗ, ದಿಢೀರನೆ ಹೊಸತೊಂದು ಅರಿವು ತನ್ನನ್ನು ಮತ್ತು ಪ್ರಕೃತಿಯನ್ನು ಕುರಿತು ಹುಟ್ಟಿತು. ಈ ಅರಿವು ತನಗೆ ಮೀರಿದ ತನ್ನ ಹಿಡಿತಕ್ಕೆ ಸಿಕ್ಕದ ಅನೂಹ್ಯ ಶಕ್ತಿಯೊಂದು ನಿಸರ್ಗದಲ್ಲಿದೆ ಎಂಬ ತಿಳುವಳಿಕೆ-ಯದಾಗಿತ್ತು. ಇದು ಆದಿಮಾನವನಲ್ಲಿ ಒಂದು ದಿಗ್ಭ್ರಮೆ, ಹೆದರಿಕೆಗಳನ್ನು ಹುಟ್ಟಿಸಿರಬೇಕು. ಹೆಣ್ಣಿನಲ್ಲಿ ಕಾಣಿಸಿಕೊಳ್ಳುವ ಮಾಸಿಕ ಮುಟ್ಟಿನ ರಕ್ತಸ್ರಾವ, ಅವಳಿಗೆ ಮಾತ್ರ ಸಾಧ್ಯವಾಗುವ ಗರ್ಭಧಾರಣೆ, ಶಿಶುವಿಗೆ ಜನ್ಮನೀಡಬಲ್ಲ ಶಕ್ತಿ ಮುಂತಾದವು ಅವಳನ್ನು ನಿಗೂಢ ನಿಸರ್ಗಕ್ಕೆ ಹತ್ತಿರವಾಗಿಸಿದ್ದು, ಆದಿಕಾಲದ ಮಾನವನ ಕಣ್ಣಿನಲ್ಲಿ ಹೆಣ್ಣಿನಲ್ಲಿ ಮೈದೋರುವ ಈ ನೈಸರ್ಗಿಕ ಪ್ರಕ್ರಿಯೆಗಳು ನಿಸರ್ಗದ ಮಾಂತ್ರಿಕ ಶಕ್ತಿಯದೇ ಅಭಿವ್ಯಕ್ತಿಯಾಗಿ ತೋರುತ್ತಿದ್ದವು. ಹೊಸಜೀವವನ್ನು ಸೃಷ್ಟಿಸುವಲ್ಲಿ ಸ್ತ್ರೀಯ ಶರೀರಜನ್ಯ ಸಾಮರ್ಥ್ಯ ಸ್ವತಃ ಪರಿಪೂರ್ಣವಾಗಿದ್ದು, ಪುರುಷನ ಅವಶ್ಯಕತೆಯೇನೂ ಅದಕ್ಕಿಲ್ಲ ಎಂಬಂತೇ ಕಾಣುತ್ತಿತ್ತು. ತನ್ನ ಮೇಲೆ ಗಾಢವಾಗಿ ನೇರವಾಗಿ ಪ್ರಭಾವ ಬೀರುವ, ತನ್ನನ್ನು ನಿಯಂತ್ರಿಸುತ್ತಿದ್ದ ವಿಶ್ವಾತ್ಮಕ ಪ್ರಾಕೃತಿಕ ಶಕ್ತಿಯನ್ನು ತನ್ನ ಹಿಡಿತಕ್ಕೆ ತಂದುಕೊಳ್ಳಲು, ಒಂದು ರೀತಿಯ ಸಾಂಕೇತಿಕ ಅಭಿವ್ಯಕ್ತಿಯು ಪ್ರಾಚೀನ ಮಾನವನಿಗೆ ಅವಶ್ಯಕವಾಯಿತು. ಹೆಣ್ಣು ತನ್ನ ಬದುಕಿನ ಮೇಲೆ ಹೊಂದಿರುವ ಪ್ರಭಾವಶಾಲಿ ಪಾತ್ರದ ಬಗ್ಗೆ ಗಂಡಿನಲ್ಲಿ ಅಸೂಯೆ, ವಿರೋಧ ಮತ್ತು ಆ ಪ್ರಭಾವವನ್ನು ಹಿಡಿದು ಮಣಿಸುವ ಆಕಾಂಕ್ಷೆಯೂ ಸೇರಿ, ಮೊಟ್ಟ ಮೊದಲ ದೈವತ್ವದ ಪರಿಕಲ್ಪನೆ ಹೆಣ್ಣಿನ ರೂಪದಲ್ಲಿ ಹೊರಹೊಮ್ಮಿರ ಬೇಕು. ಪುರುಷನ ನೆರವೇ ಬೇಕಿಲ್ಲದ ಸ್ವಯಂ ಪೂರ್ಣವಾದ ಸೃಷ್ಟಿಶೀಲವಾದ ಬ್ರಹ್ಮಾಂಡಶಕ್ತಿಯು ಪ್ರಾಚೀನ ಮಾನವರಿಗೆ ಹೆಣ್ಣಿನ ರೂಪದಲ್ಲಿ ಕಂಡಿದ್ದು, ಪ್ರಾಚೀನ ನಾಗರೀಕತೆಗಳ ಉತ್ಖನನದಲ್ಲಿ ಸಿಕ್ಕಿರುವ ನಗ್ನ ಸ್ತ್ರೀ ಮೂರ್ತಿಗಳು ಈ 'ಮಹಾಮಾತೆ'ಯ ಪಳೆಯುಳಿಕೆಗಳೆನಿಸಿವೆ.

ಪೆರು ಮತ್ತು ಮೆಕ್ಸಿಕೋಗಳಲ್ಲಿನ ಆದಿವಾಸಿ ನವಾಜೋ ಜನಾಂಗದಲ್ಲಿ ಮನುಷ್ಯರು ಮೊದಲು ಭೂಮಿಯ ಗರ್ಭದಲ್ಲಿದ್ದರು, ನಂತರ ಅಲ್ಲಿಂದ ತೆವಳಿಕೊಂಡು ಭೂಮಿಯ ಮೇಲಕ್ಕೆ ಬಂದರು ಎಂಬ ನಂಬಿಕೆ ಇದೆ. ಭೂಮಿ-ಮಾನವರ ತಾಯಿ ಎಂಬುದು ಹೀಗೆ ಬೆಳೆದ ನಂಬಿಕೆ. ಪ್ರಾಚೀನ ಮಾನವರ ಬಹು ಮುಖ್ಯ ಅವಶ್ಯಕತೆ ಆಹಾರ ಸಂಪಾದನೆ ಮತ್ತು ಸಂತಾನೋತ್ಪಾದನೆ. ಈ ಆಹಾರ ಸಂಪಾದನೆಗಾಗಿ ಗಂಡು ಬೇಟೆಗಾರನಾದರೆ, ಹೆಣ್ಣು ಆಹಾರ ಸಂಗ್ರಾಹಕಿಯಾಗಿ, ಕೃಷಿಗಾರಳಾಗಿ ರೂಪುಗೊಂಡಳು. ಗಡ್ಡೆ ಗೆಣಸುಗಳ ಸಂಗ್ರಹಣೆಗಾಗಿ ಹರಿತವಾದ ಕಲ್ಲಿನ ಆಯುಧಗಳಿಂದ ನೆಲ ಅಗೆಯುತ್ತಿದ್ದ ಸ್ತ್ರೀಯರು, ಮುಂದೆ ನೆಲ ಅಗೆದು, ಬೀಜ ಎರಚಿ, ಬೆಳೆ ಬೆಳೆಯುವ ಕಲೆಗಾರಿಕೆಯನ್ನೂ ರೂಢಿಸಿಕೊಂಡು ಮೊಟ್ಟ ಮೊದಲ ಬೇಸಾಯಗಾರರೂ ಆದರು. ಹೀಗೆ ಆಹಾರವನ್ನೂ ಉತ್ಪಾದಿಸಬಲ್ಲ, ಸಂತಾನವನ್ನೂ ಹುಟ್ಟಿಸಬಲ್ಲ ಹೆಣ್ಣಿನ ದ್ವಿಗುಣಿತ ಶಕ್ತಿಯೇ ಫಲವಂತಿಕೆಯ ಆರಾಧನೆಗಳಿಗೆ ಪ್ರೇರಣೆಯಾಯಿತು. ಮಾನವ ಜನಾಂಗದ ಅಳಿವು ಉಳಿವುಗಳನ್ನು ನಿರ್ಧರಿಸುವ 'ಫಲವಂತಿಕೆ' (ಭೂಮಿಯ ಫಸಲು ನೀಡುವ ಶಕ್ತಿ ಹಾಗೂ ಮಾನವರು ತಮ್ಮ ಸಂತಾನವನ್ನು ಹೆಚ್ಚಿಸಿಕೊಳ್ಳಬಲ್ಲ ಸಾಮರ್ಥ್ಯ) ಹೆಣ್ಣಿನ ಶರೀರದಲ್ಲಿ ಅಗೋಚರ, ಮನುಷ್ಯಾತೀತ ಶಕ್ತಿಯಾಗಿ ಪ್ರಕಟಗೊಳ್ಳುತ್ತದೆ ಎಂಬ ಭಾವನೆಯಿಂದ ಆ ಶಕ್ತಿಯನ್ನು ಪೂಜಿಸಿ, ಸ್ತುತಿಸಿ ಒಲಿಸಿಕೊಳ್ಳುವ ನಾನಾ ಧಾರ್ಮಿಕ ವಿಧಿಗಳು ಹುಟ್ಟಿಕೊಂಡವು. ಇಂಥ ಫಲವಂತಿಕೆ ಆರಾಧನೆ (Fertility cult) ಗಳಿಗೆಲ್ಲ ಸ್ತ್ರೀ ದೇಹ, ಸ್ತ್ರೀತ್ವಗಳು ತುಂಬ ಪ್ರಧಾನವಾದ ಅಂಶಗಳೆನಿಸಿದವು. ಭೂಮಿತಾಯಿ, ಮಹಾ-ಮಾತೆ-ಎರಡನ್ನೂ ಒಂದೇ ಬ್ರಹ್ಮಾಂಡಶಕ್ತಿಯ ಸೃಜನಾತ್ಮಕ ತತ್ವಗಳೆಂದು ಪ್ರಾಚೀನ ಮಾನವರು ಆರಾಧಿಸತೊಡಗಿದರು. ಹೀಗೆ 'ಮಾತೃ ಆರಾಧನೆ' ಪ್ರಾಚೀನ ಕೃಷಿ ಪ್ರಧಾನ ಸಂಸ್ಕೃತಿಗಳಲ್ಲೆಲ್ಲ ಬೆಳೆದಿತ್ತು.

ಹೆಣ್ಣಿನ ಶಕ್ತಿಯಿಂದ ತನ್ನ ಬದುಕನ್ನು ಉತ್ತಮ ಪಡಿಸಿಕೊಳ್ಳಲೆಂದು ಪ್ರಾಚೀನ ಕಾಲದ ಜನರು ಹುಟ್ಟುಹಾಕಿದ ವಿಧಿ ಆಚರಣೆಗಳೆಲ್ಲ ರಹಸ್ಯಮಯ ನಿಸರ್ಗಶಕ್ತಿಗೂ ಮಾನವರಿಗೂ ಮಧ್ಯೆ ಒಂದು ಸೇತುವೆಯಂತೆ ಕಲ್ಪಿತವಾದಂಥವು. ತಾಯಗರ್ಭದಲ್ಲಿ ಮಲಗಿದ ಶಿಶುವಿನಂತೆ ಮಾನವರು ಈ ಭೂಮಿಯಲ್ಲಿ ನೆಲೆಸಿದ್ದಾರೆಂಬುದು ಪ್ರಾಚೀನ ಮಾನವರ ದೈವಿಕ ಕಲ್ಪನೆಯಲ್ಲಿನ ಪ್ರಮುಖ ಅಂಶವಾಗಿತ್ತು. ಪ್ರಾಚೀನ ಶಿಲಾಯುಗದ ಜನರಲ್ಲಿ ಈ ಅಗೋಚರ ಶಕ್ತಿಯನ್ನು ಹೇಗಾದರೂ ತಮ್ಮ ಹಿಡಿತಕ್ಕೆ ತಂದುಕೊಳ್ಳಬೇಕೆಂಬ ಹಂಬಲ ತೀವ್ರವಾಗಿದ್ದು, ಅದರ ಜೊತೆಗೆ ಹೆಣ್ಣಿನ ಪ್ರಭಾವಶಾಲಿ ಶಕ್ತಿಯ ಬಗ್ಗೆ ಅಸಹನೆಯೂ ಇದ್ದಿರಬೇಕು. ಕೆಲವು ಮೂಲನಿವಾಸಿ ಜನಾಂಗಗಳಲ್ಲಿ ಒಂದು ಕಾಲದಲ್ಲಿ ಹೆಣ್ಣು ಗಂಡಸರನ್ನು ಆಳುತ್ತಿದ್ದಳೆಂದೂ ಇತ್ತೀಚೆಗಷ್ಟೇ ಅವರು ತಮ್ಮ ಅಧಿಕಾರ ಪಡೆದಿದ್ದಾರೆಂದೂ ಭಾವಿಸುವ ಕತೆಗಳು ವ್ಯಾಪಕವಾಗಿ ಪ್ರಚಾರದಲ್ಲಿವೆ.

ಮಾನವರು 'ಮಾತೆ'ಯನ್ನು ಆರಾಧಿಸುತ್ತಿದ್ದುದರಲ್ಲಿ ಆರಾಧನಾಭಾವಕ್ಕಿಂತ ಮೂಢ ನಂಬಿಕೆ ಹೆದರಿಕೆಗಳೇ ಪ್ರಧಾನವಾಗಿರಬೇಕು. ಪ್ರಾಚೀನ ನಾಗರಿಕತೆಗಳಲ್ಲಿ ಸಿಕ್ಕಿರುವ ಚಿಕ್ಕ ಚಿಕ್ಕ ಸ್ತ್ರೀಮೂರ್ತಿಗಳು 'ಫಲವಂತಿಕೆ'ಯನ್ನು ಹೆಚ್ಚಿಸುವ ಕಾರಣಕ್ಕಾಗಿ ಭೂಮಿಯೊಳಗೆ ಹುಗಿದಿರಬಹುದಾದ ವಿಗ್ರಹಗಳೇ ಆದರೂ, ಅವು

ನೈಸರ್ಗಿಕ ಪ್ರಕೋಪದ ವಿರುದ್ಧ ಮನುಷ್ಯರಲ್ಲಿದ್ದ ಹೆದರಿಕೆಗೂ ಸಂಕೇತವಾಗಿವೆ. ಆಸ್ಟ್ರಿಯಾದ ವಿಲೆಂಡೋರ್ಫ್ ಮತ್ತು ಫ್ರಾನ್ಸ್‌ನ ಲೆಪ್ಯೂಗ್‌ಗಳಲ್ಲಿ ದೊರೆತಿರುವ ನಗ್ನ ಸ್ತ್ರೀ ಮೂರ್ತಿಗಳು, ಬೈಕಲ್ ಸರೋವರದ ಹತ್ತಿರದಲ್ಲಿ ದೊರೆತಿರುವ 20ಕ್ಕೂ ಹೆಚ್ಚು ಸಂಖ್ಯೆಯ ಮಾಲ್ ಟಾ ಮೂರ್ತಿಗಳು, ರಷ್ಯಾದ ಕೊಸ್‌ಟನ್‌ಕೀದ್ವೀಪದಲ್ಲಿ ಅಗೆದು ತೆಗೆಯಲಾದ ಕೆತ್ತಿದ ಮೂರ್ತಿಗಳು, ಫ್ರಾನ್ಸ್‌ನ ಮೇಜಿನ್‌ನಲ್ಲಿ, ಜೆಕೋಸ್ಲಾವಾಕಿಯಾದ ವಿಸ್ಟಾನೀಸ್ ಮತ್ತು ಪ್ರೆಡ್‌ಮೊಸ್ಟ್‌ಗಳಲ್ಲಿ, ಜರ್ಮನಿಯ ಮೇನ್ಜ್‌ನಲ್ಲಿ-ಎಲ್ಲೆಲ್ಲೂ ಇಂಥ ವಿಗ್ರಹಗಳು ದೊರೆತಿವೆ. ಇವು ದೊಡ್ಡ ಸ್ತನಗಳಿರುವ, ದಪ್ಪತೊಡೆಗಳುಳ್ಳ, ದಪ್ಪ ಹೊಟ್ಟೆಗಳಿರುವ ಸ್ತ್ರೀ ಮೂರ್ತಿಗಳಾಗಿದ್ದು ಜೀವಸೃಜನ ಶಕ್ತಿಯನ್ನು ಸೂಚಿಸುವ ಹೆಣ್ಣಿನ ಅವಯವಗಳಿಗೆ ಹೆಚ್ಚು ಒತ್ತು ಕೊಟ್ಟಿರುವುದನ್ನು ಸೂಚಿಸುವಂತಿವೆ. ಈ ಬಗೆಯ ವಿಗ್ರಹಗಳ ಇರವು ಆ ಪ್ರದೇಶಗಳಲ್ಲಿದ್ದ ಪ್ರಾಚೀನ ನಾಗರೀಕತೆಗಳೆಲ್ಲ ಸ್ತ್ರೀ ಮೂಲದ ಆರಾಧನೆಯ ಧರ್ಮವನ್ನು ಮುಖ್ಯವಾಗಿ ಹೊಂದಿದ್ದುವೆಂಬುದರ ಸೂಚಕವೆಂದು ಹೇಳಲಾಗುತ್ತದೆ.

ಆದರೆ ಅಲೆಮಾರಿ ಬೇಟೆಗಾರಿಕೆ ಮುಖ್ಯವಾಗಿದ್ದ ಸಮಾಜ-ಸ್ಥಿತಿಯಲ್ಲಿ ಓಡಬಲ್ಲ, ಬಲಪ್ರಯೋಗಿಸ್ಸಬಲ್ಲ ಮಾಂಸಖಂಡವೇ ಮುಖ್ಯವಾಗಿ ಬೇಕಿತ್ತು. ಆದ್ದರಿಂದ ಹೆಣ್ಣಿನ ಮೂಲದ ಯೋನಿ, ಲಿಂಗ, ಮುಂತಾದವುಗಳ ಮಾಂತ್ರಿಕ ಆರಾಧನೆಗಳು ಕುಗ್ಗಿ, ಪ್ರಾಣಿ ಬೇಟೆಯ ಮಾಂತ್ರಿಕ ಆರಾಧನೆಗಳು ಬೆಳೆದವು. ಪ್ರಾಣಿಗಳು, ಪುರುಷರು, ಮಂತ್ರವಾದಿಯ ವೇಷ ತೊಟ್ಟಂತೆ ಚಿತ್ರಿತವಾಗಿರುವುದನ್ನು ಪ್ರಾಚೀನ ಮ್ಯಾಗ್ಡಲೀನಿಯಾ ಗುಹಾ ದೇವಾಲಯಗಳಲ್ಲಿ ಕಾಣಬಹುದು. ನರ್ತಿಸುವ ಮಾಂತ್ರಿಕರು, ಗೂಳಿಗಳು, ಕಾಡುಕೋಣಗಳು ಪ್ರಧಾನವಾದ ಈ ಚಿತ್ರಗಳು ಬೇಟೆಗಾರ ಯುಗದಲ್ಲಿ ಗಂಡಿನ ಮಾನಸಿಕ ಶಕ್ತಿ ಪ್ರಾಬಲ್ಯ ಪಡೆದ ಸ್ಥಿತಿಯನ್ನು ಸೂಚಿಸುತ್ತವೆ. ಮಾನಸಿಕ, ದೈಹಿಕ ರೋಗಗಳ ಚಿಕಿತ್ಸಕನಾಗಿ, ಭೂತ, ಪ್ರೇತ, ಪಿಶಾಚಿಗಳಂಥ ಅಗೋಚರ ಶಕ್ತಿಗಳನ್ನು ನಿಗ್ರಹಿಸಬಲ್ಲ ಈ ಮಾಂತ್ರಿಕ ಪುರುಷ-ಭೂಮಿ, ಹೆಣ್ಣು ನಿಸರ್ಗಗಳ ಮೂಲದಿಂದ ಬರಬಹುದಾದ ಈ ನಿಗೂಢ ಉಪಟಳಗಳ ಮೇಲೆ ಹಿಡಿತ ಸಾಧಿಸಿದ ಪುರುಷನ ಚೇತನದ ಮೂರ್ತಿರೂಪವೇ ಆಗಿದ್ದ. ತನಗೆ ಅತೀತವಾಗಿದ್ದ ಬ್ರಹ್ಮಾಂಡ ಮಾತೃಶಕ್ತಿಯ ಎದುರಿನಲ್ಲಿ ತಲೆಬಾಗಿಸಿ, ಶರಣಾಗುವುದಕ್ಕೆ ಬದಲಾಗಿ ಭೂಮೂಲದ ವಿರುದ್ಧ ಶಕ್ತಿಯ ಎದುರು ಮಾಂತ್ರಿಕನಾಗಿ ಹೋರಾಡಿ ಓಡಿಸಬಲ್ಲ ಇವನು ಪುರುಷಾಧಿಪತ್ಯದ ಪ್ರಥಮ ಕುರುಹು. ಈ ರೀತಿಯ ಪುರುಷಕೇಂದ್ರಿತ ನೈತಿಕ ಕಲ್ಪನೆ ಸ್ಪೇನ್, ಮಧ್ಯರಷ್ಯಾ ಮುಂತಾದಕಡೆ ಪ್ರಬಲಿಸಿತು. ಆದರೆ ಪೂರ್ವ ಆಫ್ರಿಕಾ, ಈಜಿಪ್ತ್, ಸಿರಿಯಾ, ಮೆಸೋಪೋಟಾಮಿಯಾ, ಭಾರತ ಮತ್ತು ಆಗ್ನೇಯ ಏಷ್ಯಾದ ಪ್ರದೇಶಗಳಲ್ಲಿ ಬೇರೆ ಬಗೆಯ ಪ್ರಾಚೀನ ಸಂಸ್ಕೃತಿ ಬೆಳೆದಿತ್ತು. ಈ ಪ್ರದೇಶಗಳ ಸಾಮಾಜಿಕ, ಧಾರ್ಮಿಕ ರಚನೆಗಳು ತೀರಾ ಭಿನ್ನವಾಗಿದ್ದವು. ಬೇಟೆಗಾರಿಕೆ, ಆಹಾರ ಸಂಗ್ರಹಣೆಗಳ ಹಂತಗಳನ್ನು ಎಂದೋ ದಾಟಿ ಮುಂದುವರೆದಿದ್ದ ಜನಾಂಗಗಳು ಇಲ್ಲಿ ಬೇಸಾಯದಲ್ಲಿ ನೆಲೆಗೊಂಡಿದ್ದವು.

ಸಸ್ಯೋತ್ಪಾದಕ ಆರ್ಥಿಕ ವ್ಯವಸ್ಥೆಯಲ್ಲಿ ಸ್ತ್ರೀಯರೇ ಪ್ರಮುಖ ಉತ್ಪಾದಕರು. ಆಹಾರೋತ್ಪಾದನೆ, ಸಂತಾನೋತ್ಪಾದನೆಗಳೆರಡ-ರಿಂದಲೂ ಅವರ ಸಾಮಾಜಿಕ ಪಾತ್ರ ಮಾನವರಿಗೆ ತುಂಬಾ ಮುಖ್ಯವಾಗಿತ್ತು. ಈ ವ್ಯವಸ್ಥೆಗಳಲ್ಲಿ ಸಹಜವಾಗಿ ಪುರುಷನ ಸ್ಥಾನ ಕೆಳಗಿನದಾಗಿದ್ದು ಸರ್ವಶಕ್ತ ಸರ್ವಾತೀತ ದೈವತ್ವದ ಕಲ್ಪನೆ ಹೆಣ್ಣಿನ ರೂಪ ತಳೆಯಿತು.

ಈ ಸರ್ವಾತೀತ ಸ್ತ್ರೀಶಕ್ತಿಯ ಎದುರಲ್ಲಿ ತಮ್ಮ ಸ್ಥಿತಿ ಶೋಚನೀಯವಾಗುರುವುದರ ಬಗ್ಗೆ ಪ್ರಾಚೀನ ಗಂಡಸರು ತೀವ್ರ ಸಂತಾಪವನ್ನೂ ಅನುಭವಿಸಿದ್ದಿರಬೇಕು. ಪ್ರತಿಕ್ರಿಯೆಯಾಗಿ ಪ್ರತಿಕಾರ ಭಾವನೆಗಳಿಂದ ಅನೇಕ ಗುಪ್ತ ವಾಸದ ನೆಲೆಗಳನ್ನು, ಸಮಾಜಗಳನ್ನು ಹುಟ್ಟು ಹಾಕಿ, ಅಲ್ಲಿ ರಹಸ್ಯವಾದ ಭೀಕರವಾದ ಕಾರ್ಯಾಚರಣೆಗಳಲ್ಲಿ ಅವರು ತೊಡಗಿರುತ್ತಿದ್ದುದುಂಟು. ಅವರ ಧಾರ್ಮಿಕ ವಿಧಿ ಆಚಾರಗಳೆಲ್ಲವೂ ಮುಖ್ಯವಾಗಿ ಸ್ತ್ರೀಯರ ವಿರುದ್ಧವೇ ಪ್ರೇರಿತ-ವಾಗಿದ್ದುದು ಆಶ್ಚರ್ಯಕರವಲ್ಲ. ಇಂದಿಗೂ ಪಶ್ಚಿಮ ಆಫ್ರಿಕಾ, ಮೆಲಾನೇಸಿಯಾಗಳಲ್ಲಿ ಇಂಥ ಗುಪ್ತ ಸಮಾಜದ ಜನರಿದ್ದಾರೆ. ಬೇಟೆಗಾರ ಬುಡಕಟ್ಟುಗಳಿಗಿಂತ ತೀರ ಭಿನ್ನವಾಗಿ ಬದುಕುವ ಇವರಲ್ಲಿ ಸಾಮಾಜಿಕ ಸಂಬಂಧಗಳು ಮದುವೆಮೂಲದ, ರಕ್ತ ಸಂಬಂಧಗಳಿಂದ ಉಂಟಾದವುಗಳಲ್ಲ. ಬದಲಿಗೆ ತಮ್ಮ ಸಮಾಜಕ್ಕೆ ಸದಸ್ಯರನ್ನು (ದೀಕ್ಷೆ ಮುಂತಾದವುಗಳಿಂದ) ನೇಮಿಸಿ, ನಾಯಕರನ್ನು ಚುನಾಯಿಸಿ-ಕೊಳ್ಳುವುದರ ಮೂಲಕ ಅವು ನಿರ್ಣಯಗೊಳ್ಳುತ್ತವೆ. ನರಮಾಂಸಭಕ್ಷಣೆ, ಸಲಿಂಗರತಿ, ಇವರ ಮುಖ್ಯ ಧಾರ್ಮಿಕ ಕ್ರಿಯೆಗಳು. ವಿಚಿತ್ರ ತಲೆಬುರುಡೆಗಳನ್ನು, ದೊಡ್ಡ ದೊಡ್ಡ ಭೇರಿ ಡೋಲುಗಳೇ ಮುಂತಾದ ಚರ್ಮವಾದ್ಯಗಳನ್ನು ಭೀಕರ ಮುಖವಾಡಗಳನ್ನು ತಮ್ಮ ಆರಾಧನೆಗಳಲ್ಲಿ ಇವರು ಬಳಸುತ್ತಾರೆ.

ಆದರೆ ಸ್ತ್ರೀತ್ವದ ಪರಮದ್ವೇಷಿಗಳಾದ ಈ ಸಮಾಜಗಳು ಕೂಡ ತಮ್ಮ ಮುಖ್ಯ ಆರಾಧ್ಯ ಸಂಕೇತವಾಗಿ ಸ್ತ್ರೀದೇವತೆಗಳನ್ನೇ ಆಶ್ರಯಿಸುವುದು ವಿಡಂಬನೀಯವಾಗಿದೆ, ಆದರೂ ಸತ್ಯ. ಆ ಕಾಲದ ಮಾತೃ ಆರಾಧನೆಯ ಪ್ರಭಾವ ಎಷ್ಟಿತ್ತೆಂದರೆ, ಸ್ತ್ರೀ ದ್ವೇಷಿಗಳೂ ಈ ಮಾತೃಪ್ರತೀಕವನ್ನೇ ಆರಾಧಿಸುವುದು ಅನಿವಾರ್ಯವಾಗಿರಬೇಕು.

-ಡಾ॥ ಬಿ. ಎನ್. ಸುಮಿತ್ರಾಬಾಯಿ.

# 'ಜನುಮದ ಜೋಡಿ' ಹಿಡಿದ ಜಾಡು

ಇದುವರೆವಿಗೂ ಕನ್ನಡ ಚಲನಚಿತ್ರಗಳು ಸಾವಿರಾರು ನಿರ್ಮಾಣವಾಗಿವೆ. ಅವೆಲ್ಲವೂ ಮಹಿಳೆಯನ್ನು ಚಿತ್ರಿಸಿರುವುದು ಒಂದೇ ಧಾಟಿಯಲ್ಲಿ. ಅದೇ ಜಾಡಿನಲ್ಲಿ 'ಜನುಮದ ಜೋಡಿ' ಬಹಳಷ್ಟು ದೂರ ಸಾಗಿದರೂ, ಇತರ ಚಿತ್ರಗಳಿಗಿಂತ ಒಂದಿಷ್ಟು ಇದು ಭಿನ್ನವಾಗಿದೆ. ಈ ಚಿತ್ರದ ಬಗ್ಗೆ ವಿಶೇಷ ಚರ್ಚೆಯ ಅಗತ್ಯ ಕಾಣದಿದ್ದರೂ, ಈ ಚಿತ್ರ 40 ಕೇಂದ್ರಗಳಲ್ಲಿ ನೂರು ದಿನ ನಡೆದ ಹಿನ್ನಲೆಯಲ್ಲಿ ಈ ಚಿತ್ರಕ್ಕೆ ಆರೋಪಿಸಲಾಗಿರುವ ಇತರ ಮೌಲ್ಯಗಳ ಬಗ್ಗೆ ಒಂದಿಷ್ಟು ವಿಚಾರ ಮಾಡುವ ಅಗತ್ಯವಿದೆ. ಅನೇಕ ಸಂಘ ಸಂಸ್ಥೆಗಳು ಇದೊಂದು ಅತ್ಯಂತ ವಿಭಿನ್ನವಾದ ಚಿತ್ರ ಎಂದು ಮೆಚ್ಚಿವೆ. ನಿಜಕ್ಕೂ ಈ ಚಿತ್ರ ಅಷ್ಟು ಪ್ರಗತಿಪರವಿದೆಯೇ, ಚಿತ್ರದಲ್ಲಿ ನಿಜವಾಗಿ ಮಹಿಳೆಯರ ಪರವಾದ ಕಾಳಜಿಗಳಿವೆಯೇ ಎಂದು ಯೋಚಿಸಿದಾಗ, ಕೆಳಕಂಡ ಅನೇಕ ಪ್ರಶ್ನೆಗಳು ನಮ್ಮ ಎದುರು ನಿಲ್ಲುತ್ತವೆ.

1. ನಾಯಕಿ ತಾಳಿಯ ಬಗ್ಗೆ ಕೊನೇ ರೀಲಿನಲ್ಲಿ ನಾಲ್ಕು ಮಾತು ಹೇಳಿದರೂ, ಅವಳ ನಡವಳಿಕೆ ನೋಡುವ ಜನಸಾಮಾನ್ಯರಿಗೆ ಸಾರುವ ಸಂದೇಶ ಬೇರೆಯಾಗಿಯೇ ಕಾಣುತ್ತದೆ. ಬೇರೊಬ್ಬನೊಡನೆ ಮದುವೆಯಾದ ಹೆಣ್ಣು ತಾನು ಪ್ರೀತಿಸಿದವನನ್ನು ಪಡೆಯಲು, ತನ್ನ ಜೀವದ ಪಣ ಒಡ್ಡಿಯಾದರೂ 'ಕನ್ಯೆ'ಯಾಗಿ ಉಳಿಯಬೇಕು ಎನ್ನುವ ಸಂದೇಶ ವಾಸ್ತವ ಪರಿಸ್ಥಿತಿಯಲ್ಲಿ ಸಾಧ್ಯವಾಗುವಂಥದ್ದೇ?

2. ಚಿತ್ರದಲ್ಲಿ ಮೊದಲಿನಿಂದಲೂ ನಾಯಕಿಯನ್ನು ಮದುವೆಯಾಗುವವನು ಅತಿ ದಡ್ಡ, ಪೆದ್ದ ಎಂದು ತೋರಿಸಲಾಗಿದೆ. ಅವನ ಜಾಗದಲ್ಲಿ ನಾಯಕನಷ್ಟೇ ಬಲಿಷ್ಠನೂ, ಸುಂದರನೂ, ಸಹೃದಯನೂ ಆದ ಯುವಕನಿದ್ದಿದ್ದರೆ ನಾಯಕಿ 'ಕನ್ಯೆ'ಯಾಗಿ ಉಳಿಯುತ್ತಿದ್ದಳೇ? ನಾಯಕನನ್ನು ಕೊನೆಯಲ್ಲಿ ಪಡೆಯಲು ಈ 'ಕನ್ಯತ್ವ' ಇಷ್ಟು ಅನಿವಾರ್ಯವಿತ್ತೇ?

3. ಹೆಣ್ಣಿನ ಸ್ವಂತಿಕೆ ಉಳಿಯುವುದು, ಅವಳ ಮಾತು ನಡೆಯುವುದು, ಅವಳ ಎದುರು ಬೌದ್ಧಿಕವಾಗಿ, ಮಾನಸಿಕವಾಗಿ ಕೆಳಮಟ್ಟದ ಪುರುಷನನ್ನು ಚಿತ್ರಿಸಿದಾಗ ಮಾತ್ರ ಏನು?

4. ಈ ಚಿತ್ರದಲ್ಲಿರುವ ಒಂದು ದೃಶ್ಯ- ನಾಯಕನನ್ನು ಒಲಿಸಿಕೊಳ್ಳಲು ನಾಯಕಿ ಅಲ್ಲದ ಮತ್ತೊಬ್ಬ ಯುವತಿ ಸೀರೆಯ ಸೆರಗು ತೆರೆದುಕೊಂಡು ಮಾಡುವ ನೃತ್ಯ ಕೀಳು ಅಭಿರುಚಿಯಿಂದ ಕೂಡಿಲ್ಲವೇ? ಇದು ನಿಜಕ್ಕೂ ಚಿತ್ರಕ್ಕೆ ಅಗತ್ಯವಿತ್ತೆ? ಸಾಮಾಜಿಕ ಸಂಸ್ಕೃತಿಯನ್ನು ರೂಪಿಸುವ ಚಿತ್ರ ಎಂಬ ಹೊಗಳಿಕೆ ಪಡೆದ ಚಿತ್ರದಲ್ಲಿ ಈ ದೃಶ್ಯ ಯಾವ ಸಂಸ್ಕೃತಿಯನ್ನು ರೂಪಿಸುತ್ತದೆ?

ಬರೀ ಡ್ರಿಲ್ ಮಾಡುವ ವಿದೇಶೀ ಅನುಕರಣೆಯ 'ಬ್ರೇಕ್ ನೃತ್ಯ'ಗಳು, ಇಲ್ಲ, ಮಳೆಯಲ್ಲಿ ಮೈನೆನೆದು ಮರ ಸುತ್ತುವ ಹಾಡುಗಳು, ಸೆರಗು ತೆರೆದ 'ಚೋಲಿ'ಯ ಸುತ್ತ ಹೆಣೆವ ಕಚಗುಳಿ ಗೀತೆಗಳು ಮಾತ್ರ ಯಶಸ್ವಿಯಾಗುತ್ತವೆ ಎಂಬ ಭ್ರಮೆ ಇರುವ ಚಿತ್ರ ತಯಾರಕರಿಗೆ, ಇದೇ ಚಿತ್ರದಲ್ಲಿರುವ ನಮ್ಮ ನೆಲದ, ನಮ್ಮ ಜಾನಪದದ ಕಂಸಾಳೆ ನೃತ್ಯ-ಗೀತೆ ಎಷ್ಟು ಸುಲಭವಾಗಿ ನೋಡುವವರನ್ನು ಹಿಡಿದಿಡಬಲ್ಲದು ಎಂದು ಈ ಚಿತ್ರದ ಯಶಸ್ಸು ಈಗಲಾದರೂ ತಿಳಿಸಿಕೊಟ್ಟಿರಬಹುದೆ?

5. ಮಲತಾಯಿ ಮತ್ತು ಅತ್ತೆ - ಈ ಎರಡೂ ಮಹಿಳಾ ಪಾತ್ರಗಳೂ ಒಂದೇ ಅಚ್ಚಿನ ಎರಕಗಳಾಗಬೇಕಿತ್ತೆ? ತನ್ನ ತಂದೆಯ ವಯಸ್ಸಿನ ಗಂಡನನ್ನು ತನ್ನದೇ ವಯಸ್ಸಿನ ಮಕ್ಕಳನ್ನು ಪಡೆಯಲು ದಬ್ಬುವ ಮಲತಾಯಿ 'ಪಟ್ಟ'ದ ಅನಿವಾರ್ಯತೆ ಕ್ರೂರವೋ, ಅಂಥದ್ದೇ ಸ್ಥಿತಿಯಲ್ಲಿ ಸಿಕ್ಕಿಕೊಂಡ ಮಲತಾಯಿ ಕ್ರೂರಳೋ, ಎಂದು ಯಾವ ಚಿತ್ರದಲ್ಲೂ ಯಾರೂ ಯೋಚಿಸಿಲ್ಲ ಏಕೆ? ತನ್ನ ತಾಯಿ ವಯಸ್ಸಿನ ಮಹಿಳೆಯನ್ನು ಮದುವೆಯಾಗಿ, ತನ್ನ ವಯಸ್ಸಿನ ಮಕ್ಕಳಿಗೆ ಮಲತಂದೆಯಾಗುವ ಪ್ರಮೇಯ ಈ ನೆಲದಲ್ಲಿ ಯಾವ ಪುರುಷನಿಗೂ ಬರುವುದಿಲ್ಲ. ಆದ್ದರಿಂದ ಮಲತಾಯಿಯ ಸಂಕಷ್ಟಗಳು, ಒತ್ತಡಗಳು ಈ ಪುರುಷ ಪ್ರಧಾನ ಸಮಾಜದಲ್ಲಿ ಎಲ್ಲೂ ದಾಖಲಾಗುವುದಿಲ್ಲ. 'ಮಲತಾಯಿ'ಯ ಚಿತ್ರಣ ಅದೇ ಪೂರ್ವಾಗ್ರಹದ 'ಸ್ಟೀರಿಯೋ ಟೈಪ್' ಪಾತ್ರವಾಗಿ ಈ ಚಿತ್ರದಲ್ಲೂ ಉಳಿಯಬೇಕಿತ್ತೇ?

6. ಪುರುಷರಿಗೆ ಇಬ್ಬರು ಅಥವಾ ಅದಕ್ಕಿಂತ ಹೆಚ್ಚು ಹೆಂಡತಿಯರು ನಮ್ಮ ಅನೇಕ ಚಿತ್ರಗಳಲ್ಲಿ ಅತಿ ಸಹಜವಾಗಿ ಕೆಲವೊಮ್ಮೆ ಆದರ್ಶವಾಗಿ ಕೂಡಾ ಚಿತ್ರಿತವಾಗಿದೆ. ಮಹಿಳೆಗೆ ಮಾತ್ರ ಇದು ನೈತಿಕತೆಯ ಪ್ರಶ್ನೆಯಾಗಿ ನಿಲ್ಲುತ್ತದೆ. ತಾಳಿ ಬಿಗಿದ ಒಂದೇ ತಪ್ಪಿಗೆ, ಅವನಿಗೆ 'ಹೆಂಡತಿ'ಯೇ ಆಗಿರದಿದ್ದ 'ಕನ್ಯೆ ಪತ್ನಿ'ಯ ದಾರಿ ಸುಗಮವಾಗಿಸಲು ನಾಯಕಿಯ ನಿಷ್ಪಾಪಿ ಗಂಡನನ್ನು ಸಾಯಿಸಬೇಕಿತ್ತೇ? ನಾಯಕಿ ವಿಧವೆಯಾದರೆ ಮಾತ್ರ ಅವಳು ತನ್ನ ಪ್ರೇಮಿಯನ್ನು ಸೇರಲು ಸಾಧ್ಯ ಎನ್ನುವ ತರ್ಕ ಪ್ರಗತಿಪರ ಮುಖವಾಡದಡಿ ಮತ್ತೆ ಪ್ರತಿಗಾಮಿ ಧೋರಣೆಯನ್ನೇ ಬಿತ್ತರಿಸುವುದಿಲ್ಲವೆ?

7. ನಾಯಕ ಎಂದೊಡನೆ ಆತ ವೀರನೂ, ಶೂರನೂ, ಆಗಿರಲೇ ಬೇಕು ಎಂಬ ಸಿದ್ಧ ಮಾದರಿಗಳಿಂದ ನಮ್ಮ ಚಿತ್ರಗಳು ಬಿಡಿಸಿಕೊಳ್ಳಲಾರವೆ?

ಇಷ್ಟೆಲ್ಲ ಕೊರತೆಗಳು ಕಂಡರೂ, ಈ ಚಿತ್ರದಲ್ಲಿ ಮೆಚ್ಚಬೇಕಾದ ಅಂಶಗಳಿವೆ. ಕೊರಳಿಗೆ ತಾಳಿ ಬಿಗಿದರೆ ಮುಗಿಯಿತು, ಅದಕ್ಕೇ ಆತುಕೊಂಡು ಕಟ್ಟಿದವ, ಕಟುಕನಾಗಲಿ, ಕೆಡುಕನಾಗಲಿ, ಕುಡುಕನಾಗಲಿ ಅವನ ಪಾದದಲ್ಲೇ ಬಿದ್ದು ಸಾಯಬೇಕೆಂದು ಬಿತ್ತರಿಸಿದ ಚಿತ್ರಗಳ ಜಾಡು ತೊರೆದು ಮೊಟ್ಟ ಮೊದಲಿಗೆ ಹೆಣ್ಣು ತನ್ನ ಮನಸೊಪ್ಪದೆ ನಡೆವ ಮದುವೆಯನ್ನು, ಬಲವಂತಕ್ಕೆ ಕಟ್ಟುವ ತಾಳಿಯನ್ನು, ಅದರ ಪಾವಿತ್ರತೆಯನ್ನು, ಎಷ್ಟೇ ಕ್ಷೀಣ ಸ್ವರದಲ್ಲಾದರೂ ಸರಿಯೇ ಧಿಕ್ಕರಿಸುತ್ತಾಳೆ, ಪ್ರಶ್ನಿಸಿದ್ದಾಳೆ. ಅಷ್ಟೇ ಅಲ್ಲ, ಹೆಣ್ಣಿಗೆ ಮಾತಿನ ಅವಕಾಶವನ್ನೂ ನೀಡದೆ ಆಕೆಯನ್ನು 'ನೀತಿಗೆಟ್ಟವಳು' ಎಂದು ನಿರ್ಧರಿಸಿ ತೀರ್ಪು ಕೊಡ ಹೊರಟ 'ಸಂಭಾವಿತ ಸಮಾಜ'ದ ಬೂಟಾಟಿಕೆಯನ್ನು ಎತ್ತಿ ರಾಚುವ ಒಂದು ಸಣ್ಣ ಪ್ರಯತ್ನವನ್ನು ಕೂಡಾ ಚಿತ್ರದ ಕೊನೆಯ ರೀಲಿನಲ್ಲಿ ಕಾಣಬಹುದು. 'ತಾಳಿ' ಮೇಲೆ ಸಾವಿರ ಚಿತ್ರ ಬಂದಿದ್ದು, ಹೆಣ್ಣು ತಾಳಿ ಹಿಡಕೊಂಡು ಸಾವಿರ ತ್ಯಾಗ ಮಾಡಿ ಕಣ್ಣೀರುಗರೆದರೇ ಚಿತ್ರ ಯಶಸ್ವಿಯಾಗುವುದು ಎಂದು ಭಾವಿಸಿದ ಚಿತ್ರ ನಿರ್ಮಾಪಕರಿಗೆ 'ಜನುಮದ ಜೋಡಿ'ಯ ಯಶಸ್ಸು ಹೊಸ ಜಾಡುಗಳನ್ನು ತೋರಿಸೀತು ಎಂಬ ಸಣ್ಣ ಆಶಯ.

-ಅಚಲ

---

## ಮಕ್ಕಳ ಹೆಸರಿನಲ್ಲಿ ದೋಚಿ ಹೋದವರು

'ವಿಶ್ವ ಸುಂದರಿ ಸಂಘಟನೆ' ತನ್ನ 'ಧ್ಯೇಯೋದ್ದೇಶದ ಸೌಂದರ್ಯ ಸ್ಪರ್ಧೆ' ಮುಗಿಸಿ ಗಂಟು ಕಟ್ಟಿಕೊಂಡು ಹೋಗಿ ನಾಲ್ಕು ತಿಂಗಳಾದರೂ, ಎ.ಬಿ.ಸಿ.ಎಲ್. ನಿಂದ ಅಷ್ಟೆಲ್ಲ ಪ್ರಚಾರಿತ ಹಣದ ಗಂಟು (60 ಲಕ್ಷ) ಸ್ಪಾಸ್ಟಿಕ್ ಮಕ್ಕಳಿಗೆ ಕಡೆಗೂ ಬರಲಿಲ್ಲ. ಈ ಹಣವನ್ನು ನಂಬಿದ್ದ 'ಕರ್ನಾಟಕ ಸ್ಪಾಸ್ಟಿಕ್ ಸೊಸೈಟಿ' ಈಗ ಇಂಥ ಮಕ್ಕಳಿಗೆ ಸಹಾಯವಾಗಬೇಕಿದ್ದ ತನ್ನ 'ಸಂಶೋಧನಾ ಕೇಂದ್ರ'ದ ಕೆಲಸವನ್ನು ಮುಗಿಸಲಾರದೆ ಪೇಚಾಡುತ್ತಿದೆ. ''ನಮ್ಮ ಮಕ್ಕಳು ಪ್ರದರ್ಶನದ ವಸ್ತುಗಳಾಗಿ ಶೋಷಿಸಲ್ಪಟ್ಟು ಮೋಸ ಹೋದ ಭಾವನೆ ನಮ್ಮನ್ನು ಕಾಡುತ್ತಿದೆ. ಸ್ಪಾಸ್ಟಿಕ್ ಮಕ್ಕಳ ಹೆಸರು ಹೇಳಿಕೊಂಡು ಎ.ಬಿ.ಸಿ.ಎಲ್.ಗೆ ಬಹಳಷ್ಟು ಹಣ ಬಂದಿರುವುದುಂಟು. ನಮಗೆ ಈ ವಿಷಯ ತುಂಬಾ ನೋವು ತಂದಿದೆ.'' ಎಂದು ಸ್ಪಾಸ್ಟಿಕ್ ಸೊಸೈಟಿಯ ಸದಸ್ಯರು ಇತ್ತೀಚಗೆ ತೋಡಿಕೊಂಡಿದ್ದಾರೆ. ಸಾಲದ್ದಕ್ಕೆ ಸ್ಪಾಸ್ಟಿಕ್ ಮಕ್ಕಳನ್ನು ಒಬ್ಬೊಬ್ಬ ಸುಂದರಿಯ ಕೈಗೂ ಕೊಟ್ಟು ಕ್ಯಾಮರಾಗೆ ಒಡ್ಡಿ, ''ಅಷ್ಟೆಲ್ಲ ಪ್ರಚಾರ ಸಿಕ್ಕ ಮೇಲೆ ಸೊಸೈಟಿಗೆ ಬಹಳಷ್ಟು ಹಣ ಬಂದಿದೆ ಎಂದು ಎಲ್ಲರೂ ಭಾವಿಸಿದ್ದಾರೆ. ಹೀಗಾಗಿ ಮೊದಲಿನಂತೆ ಜನ ಸಾಮಾನ್ಯರಿಂದ, ಕಾರ್ಪೊರೇಟ್ ಗೃಹಗಳಿಂದ ಬರುತ್ತಿದ್ದ ಚಂದಾ ಹಣ ಇಳಿದೇ ಹೋಗಿದೆ. ನಮ್ಮ ಗ್ರೀಟಿಂಗ್ ಕಾರ್ಡ್‌ಗಳ ಮಾರಾಟ ಕೂಡಾ ತಟ್ಟನೇ ಇಳಿಮುಖವಾಗಿದೆ'' ಎಂದು ಗೋಳು ಹೇಳಿಕೊಂಡಿರುವ ಸೊಸೈಟಿ ಮತ್ತೆ ಜನರಲ್ಲಿ ಹಣ ನೀಡುವಂತೆ ಮನವಿ ಮಾಡಿಕೊಂಡಿದೆ.

'ಸೌಂದರ್ಯ ಸ್ಪರ್ಧೆ'ಗಳ ಮೂಲ ಉದ್ದೇಶಗಳ ಬಗ್ಗೆ ಮಹಿಳಾ ಸಂಘಟನೆಗಳು ಕೂಗಿ ಹೇಳುವಾಗ, ಸೊಸೈಟಿಯ ಕಿವಿಗೆ ಅದು ಬಿದ್ದೇ ಇರಲಿಲ್ಲ. ಈ ಘಟನೆ ನಮ್ಮ ಬಹಳಷ್ಟು ಸೇವಾ ಸಂಸ್ಥೆಗಳ ಕಣ್ಣು ತೆರೆಸಬೇಕು. ಒಂದು ಒಳ್ಳೆಯ ಕೆಲಸಕ್ಕೇ ಆಗಲಿ, ಹಣ ಬರುತ್ತದೆ ಎಂದೊಡನೆ, ಹಣ ನೀಡುವವರ ನಿಜವಾದ ಉದ್ದೇಶವನ್ನು ಅರ್ಥ ಮಾಡಿಕೊಳ್ಳದೆ ಸಂಭ್ರಮದಿಂದ ತಮ್ಮ ಸಂಸ್ಥೆಯ ಸಂಪೂರ್ಣ ಬೆಂಬಲ ನೀಡುವುದು ಅಪಾಯಕಾರಿಯಾಗಬಲ್ಲದು. ಎಲ್ಲಿಂದ, ಯಾರಿಂದ, ಹೇಗೆ, ಯಾವ ಕಾರಣಕ್ಕೆ ಆ ಹಣ ಬರುತ್ತದೆ ಎಂದು ಸಂಸ್ಥೆಗಳು ಸೂಕ್ಷ್ಮವಾಗಿ ಗಮನಿಸಬೇಕು. ಹಣ ನೀಡುವವರ ನಿಜವಾದ ಉದ್ದೇಶ ಏನು, ವ್ಯಾಪಾರಿ ಸಂಸ್ಥೆಗಳು ತಮ್ಮ ಲಾಭಕೋರತನಕ್ಕೆ ನಮ್ಮನ್ನು ಬಳಸಿಕೊಳ್ಳುತ್ತಿದ್ದಾರೆಯೇ ಎಂಬುದರ ಬಗ್ಗೆ ಸಂಸ್ಥೆಗಳು ಎಚ್ಚರವಿರಬೇಕಾದ ಅಗತ್ಯವಿದೆ .

## ನಿಮ್ಮಿಂದ

ಮಾನ್ಯರೇ,

ತಮ್ಮ ಈ ಸಲದ **'ಅಚಲ'** ಸಂಚಿಕೆಯು ತಲುಪಿದೆ. ಇದೊಂದು ಮಹಿಳೆಯರನ್ನು ಜಾಗೃತಗೊಳಿಸಲು ಶ್ರಮಿಸುವ ಪತ್ರಿಕೆಯಾಗಿದೆ. ಇದರಲ್ಲಿ ಬರುವ ಲೇಖನಗಳು ವಿಚಾರಪೂರ್ಣ ಹಾಗೂ ಸಮಯೋಚಿತವಾಗಿವೆ. ಇದನ್ನು ಸಕಾಲಕ್ಕೆ ಕಳುಹಿಸಿದ ತಮಗೆ ಧನ್ಯವಾದಗಳು.

-ಶ್ರೀದೇವಿ ಎಸ್.ಜೆ.
ಸುಮಂಗಲಿ ಸೇವಾಶ್ರಮ ಬೆಂಗಳೂರು.

ಶಾಂತಾ ನಾಗರಾಜ್‌ರ ಮನಮಿಡಿಯುವ ಕವನ ''ವಿಶ್ವಸುಂದರಿಗೆ ಮಾರ್ಗದರ್ಶಿ'' ಬಹಳ ಚೆನ್ನಾಗಿದೆ.

-ಶಾರದಾ ಮಳಿಬೆನ್ನೂರು
ಬಳ್ಳಾರಿ.

**'ಅಚಲ'** ತಲುಪಿತು. ಸಂಚಿಕೆಯ ಪುಟ ಪುಟವೂ ಮೌಲಿಕವಾಗಿವೆ. ನನ್ನ ಮೊದಲ ನೋಟದಲ್ಲೇ ಮನ ಸೆಳೆದ 'ಅಚಲ' ಭವಿಷ್ಯದಲ್ಲಿ ಏನಾದರೂ ಸಾಧಿಸಿಯಾಳೆಂಬ ಭರವಸೆ ಮೂಡಿಸಿದೆ.

-ಉದಯ್ ಪುತ್ತೂರ್
ಉಡುಪಿ.

ಈ ಬಾರಿಯೂ **'ಅಚಲ'** ನಮ್ಮ ಮನೆ ಸೇರಿದ್ದಾಳೆ. ಈ ಸಲದ ''ಚಿಂತನೆ'' ಎಲ್ಲರ ಚಿತ್ತವನ್ನೂ ಕಲಕುವಂತಿದ. ಸತ್ಯದ ಸಂಗತಿಯೆಂದರೆ, ಕೆಲವರಿಗೆ ಕಹಿ ಎನಿಸಬಹುದೇನೋ! ಆದರೆ ನನಗಂತೂ ತುಂಬಾ ಸಂತೋಷವಾಗಿದೆ. ಕೆ. ಸತ್ಯ ನಾರಾಯಣರವರ **''ಹೆಂಗುಸರ ಎರಡನೆಯ ಪಾಳಿ''** ನಿಜಕ್ಕೂ ಬಹಳ ಅರ್ಥಪೂರ್ಣವಾಗಿ ಮೂಡಿಬಂದಿದೆ. ಇದು ದಿನನಿತ್ಯದ ಸತ್ಯದ ಸಂಗತಿ. ಇನ್ನು ಮುಂದೆಯೂ ಅಚಲ ಇದೇ ರೀತಿ ಉತ್ತಮವಾಗಿ ಮೂಡಿ ಬರುತ್ತೆ ಅಂತ ಆಶಿಸುತ್ತೇನೆ.

-ವನಜಾ ಶೇಖರ್
ಬೆಂಗಳೂರು.

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ — ರೆಸಿಡೆಂಟ್ಸ್ ವೆಲ್‌ಫೇರ್ ಅಸೋಸಿಯೇಷನ್

## ಅಕ್ಷರ ಸಂಸ್ಥೆ

### ಮಕ್ಕಳಿಗೆ ಬೇಸಿಗೆ ಶಿಬಿರ

ಈ ಮೇಲ್ಕಂಡ ಮೂರು ಸಂಸ್ಥೆಗಳ ಆಶ್ರಯದಲ್ಲಿ ಇದೇ ವರ್ಷದ ಏಪ್ರಿಲ್ 10 ರಿಂದ ಮೇ 10 ನೇ ತಾರೀಖಿನವರೆಗೆ ಮಕ್ಕಳಿಗಾಗಿ ''ರಂಗ ಶಿಬಿರ'' ವನ್ನು ಏರ್ಪಡಿಸಲಾಗಿದೆ. ಈ ಶಿಬಿರದಲ್ಲಿ ರಂಗ ತರಬೇತಿಯಲ್ಲದೆ ಡ್ರಾಯಿಂಗ್, ಪೇಂಟಿಂಗ್ ಮತ್ತು ಜೇಡಿಮಣ್ಣಿನ ಆಟಿಕೆಗಳನ್ನು ಮಾಡುವುದನ್ನೂ ಕಲಿಸಲಾಗುತ್ತದೆ. ಸ್ಥಳಾವಕಾಶ ಕಡಿಮೆ ಇರುವ ಪ್ರಯುಕ್ತ ಮೊದಲು ಬಂದವರಿಗೆ ಆದ್ಯತೆ.

ವಿವರಗಳಿಗೆ ಕೆಳಕಂಡ ವಿಳಾಸದಲ್ಲಿ ಸಂಪರ್ಕಿಸಿ.

### ಮಹಿಳೆಯರಿಗೊಂದು ಸದವಕಾಶ

ಮಹಿಳೆಯರಲ್ಲಿರುವ ಪ್ರತಿಭೆ ಮತ್ತು ಕರ್ತೃತ್ವ ಶಕ್ತಿಗೆ ವೇದಿಕೆ ನಿರ್ಮಿಸಲು ಈ ಬಾರಿ 'ಮಹಿಳಾ ರಂಗ ಶಿಬಿರ' ವನ್ನು ಏರ್ಪಡಿಸಲಾಗಿದೆ. ಇದರಲ್ಲಿ ರಂಗ ತರಗತಿಗಳಲ್ಲದೆ, ಮಹಿಳೆಯರಿಗೆ ಉಪಯುಕ್ತವಾಗುವ ಇತರ ತರಗತಿಗಳನ್ನೂ ನಡೆಸಲಾಗುವುದು. ಕೇವಲ ಮೂವತ್ತು ಮಹಿಳೆಯರಿಗೆ ಮಾತ್ರ ಶಿಬಿರದಲ್ಲಿ ಸ್ಥಳಾವಕಾಶವಿರುವುದರಿಂದ ಮೊದಲು ಬಂದವರಿಗಷ್ಟೇ ಆದ್ಯತೆ.

**ವಿವರಗಳಿಗೆ ಇಲ್ಲಿ ವಿಚಾರಿಸಿ.**

**ಶಾಂತಾ ನಾಗರಾಜ್**
161 ಎ/16, 7ನೇ ಕ್ರಾಸ್,
ಒಂದನೇ 'ಎನ್' ಬ್ಲಾಕ್,
ರಾಜಾಜಿನಗರ, ಬೆಂಗಳೂರು - 10

ಮೊನ್ನೆ ಬಸ್‌ಸ್ಟಾಂಡಿನಲ್ಲಿ ಬಾರದ ಬಸ್ಸಿಗಾಗಿ ಚಡಪಡಿಸುತ್ತಾ ನಿಂತಿದ್ದೆ. ಸುಮಾರು 24 ವಯಸ್ಸಿನ ತರುಣಿಯೊಬ್ಬಳು ಎರಡು ವರ್ಷದ ಮಗಳನ್ನು ಕಂಕುಳಲ್ಲಿರಿಸಿಕೊಂಡು ನಿರ್ಮಲವಾಗಿ ನಗುತ್ತಾ ''ನೆನಪಿದೆಯಾ ಆಂಟಿ'' ಎಂದಳು. ಈ ಆಂಟಿ ಸಂಸ್ಕೃತಿ ನಮ್ಮ ಕನ್ನಡದಲ್ಲಿ ಎಷ್ಟು ಬೆರೆತು ಹೋಗಿದೆಯೆಂದರೆ ಗೊತ್ತುಗುರಿಯಿಲ್ಲದ ಎಷ್ಟೋ ಜನರಿಗೆ ನಾವು 'ಆಂಟಿ'ಗಳಾಗಿ ಬಿಡುತ್ತೇವೆ. ಇಂಥ ವೇಳೆಯಲ್ಲಿ ನಾವು ಆಂಟಿಯ ನಿಜವಾದ ಸಂಬಂಧದ ಎಳೆಗಳನ್ನು ಹುಡುಕುವಂತೆಯೇ ಇಲ್ಲ. ನನಗೆ ಆಕೆಯ ನೆನಪು ಬರಲಿಲ್ಲ. ಪ್ರಾಮಾಣಿಕವಾಗಿ ಒಪ್ಪಿಕೊಂಡು ಬಿಟ್ಟೆ ''ಇಲ್ಲಮ್ಮ ನೆನಪು ಬರ್ತಾ ಇಲ್ಲ'' ಆಕೆ ವಿವರಿಸುತ್ತಾ ಹೋದಳು. ನನ್ನ ನೆನಪಿನ ಕೋಶದಲ್ಲಿ ಮೂರುವರ್ಷಗಳ ಹಿಂದಿನ ಘಟನೆ ಪುಟ್ಟಮುದ್ದೆಯಾಗಿ ಮುಚ್ಚಿಕೊಂಡೇ ಬಿಟ್ಟದ್ದು ಪ್ರಾರಂಭಿಕ ದಿನಗಳಲ್ಲಿ ಸದಾ ಕಾಡಿದ್ದು, ಎಲ್ಲವೂ ಸುರುಳಿ ಬಿಚ್ಚತೊಡಗಿತು.

ಮೂರು ವರ್ಷಗಳ ಹಿಂದೆ ತೀರ್ಥಹಳ್ಳಿಗೆ ನೆಂಟರ ಮನೆಯ ಮದುವೆಯ ಕಾರಣಕ್ಕಾಗಿ ಹೋಗಿದ್ದರೂ ನನ್ನಲ್ಲಿ ಮತ್ತೊಂದು ಕುತೂಹಲವೂ ಇತ್ತು. 'ತುಂಗಭದ್ರ' 'ತಗ್ಗಿನ ಮನೆ ಸೀತೆ' ಇವುಗಳಲ್ಲಿ ತೀರ್ಥಹಳ್ಳಿಯ ವಿವರಣೆ ಎಷ್ಟು ಸುಂದರವಾಗಿ 'ಎಂ.ಕೆ.ಇಂದಿರಾ'ರವರು ಮೂಡಿಸಿದ್ದಾರೆಂದರೆ ಆ ಕಾದಂಬರಿ ಓದುತ್ತಾ ತೀರ್ಥಹಳ್ಳಿಯ ಸೊಬಗಿಗೆ ಮಾರು ಹೋಗಿ ಕಾಶಿ ನೋಡದಿದ್ದರೂ ಪರವಾಗಿಲ್ಲ, ತೀರ್ಥಹಳ್ಳಿ ನೋಡಬೇಕು ಎಂದು ಕನಸು ಕಂಡಿದ್ದೆ. ತುಂಗಾತೀರದ ದೃಶ್ಯ ಇಂದಿರಾರವರ ವರ್ಣನೆಗೆ ತದ್ವಿರುದ್ಧವಾಗಿತ್ತು. ಹರಿಯುವ ನೀರಿನ ಮೇಲೆ ಯಾವ ಮರದ ನೆರಳೂ ಚೆಲ್ಲಾಟವಾಡುತ್ತಿರಲಿಲ್ಲ. ಏಕೆಂದರೆ ಅಲ್ಲಿದ್ದ ಮರಗಳು ಮಾಯವಾಗಿದ್ದವು. ಹರಿಯುತ್ತದ್ದ ನೀರೂ ಕ್ಷೀಣವಾಗಿ ದಡದಲ್ಲಿ ಮರಳೂ ಮಾಯವಾಗಿ ಅರೆಬಿದ್ದ ಬಂಡೆಗಳು, ಬರದಲ್ಲಿ ಬದುಕುವ ಹಸುಗಳ ಮೂಳೆಗಳಂತೆ ವಿಕಾರವಾಗಿ ತೋರುತ್ತಿದ್ದವು. ಆ ಬಂಡೆಗಳ ಸಂದಿಗಳಲ್ಲಿ ಪಶು, ಪ್ರಾಣಿ, ಮನುಷ್ಯರ ಮಲ ಮೂತ್ರಗಳು ಸೇರಿಕೊಂಡು ಒಟ್ಟು ವಾತಾವರಣವನ್ನು ಗಬ್ಬುನಾತದಿಂದ ಅಸಹನೀಯವಾಗಿಸಿದ್ದವು. ಇಂಥ ಬೇಸರದಲ್ಲಿದ್ದಾಗಲೇ ನನ್ನೊಂದಿಗೆ ಬಂದಿದ್ದ ನೆಂಟರು ''ಇಲ್ಲೇ ಆರೇಳು ಕಿಲೋ ಮೀಟರ್ ದೂರದಲ್ಲಿ ಹಳ್ಳಿಯೊಂದಿದೆ. ಅಲ್ಲಿ ನದಿ ನಿಮ್ಮ ಕಲ್ಪನೆಯಂತೇ ಇದೆ ಬನ್ನಿ ಹೋಗೋಣ'' ಎಂದರು. ಹೋದೆವು. ನಿಜ ಅಲ್ಲಿ ಇಂದಿರಾರವರ ತುಂಗೆ ಹರಿಯುತ್ತಿದ್ದಳು. ಪರಿಸರ ತುಂಬ ಮುದನೀಡುತ್ತಿತ್ತು. ಖುಷಿಯನ್ನು ಅನುಭವಿಸುತ್ತಿದ್ದ ಹಾಗೇ ಮದ್ಯಾಹ್ನ 12 ಗಂಟೆಯಾಯಿತು. ಬೇಸಿಗೆಯ ದಿನಗಳಾದರೂ ಅಲ್ಲಿಯ ತಂಪೇ ತಂಪು!! ತೀರದಲ್ಲಿ ಒಂದು ಪುಟ್ಟ ಹಳೆಯ ಕಾಲದ ದೇವಾಲಯವಿತ್ತು. ಅಲ್ಲಿ ಘಂಟೆಯ ನಾದ ಕೇಳಿಸಿತು. ನೆಂಟರ ಆಶಯದಂತೆ ದೇವಸ್ಥಾನಕ್ಕೆ ಹೋದೆವು. ಅಲ್ಲೊಂದು ವಿಚಿತ್ರ ದೃಶ್ಯ. ನಾಲ್ಕಾರು ಪೇಟೆ ಹುಡುಗರಂತೆ ಕಾಣುತ್ತಿದ್ದ ತರುಣರು. ಒಬ್ಬಳೇ ಒಬ್ಬಳು ತರುಣಿ, ಸಾಧಾರಣ ಕಾಟನ್ ಚೂಡೀದಾರ್ ಹಾಕಿದ್ದಾಳೆ. ಅವಳ ಕುತ್ತಿಗೆಯಲ್ಲೊಂದು ಹೂವಿನ ಸರವಿದೆ. ಹುಡುಗರ ಪೈಕಿ ಒಬ್ಬನಿಗೆ ಹಣೆಯ ಮೇಲೆ ನಾಮ ಬಳಿದಿದೆ. ಅವನ ಕುತ್ತಿಗೆಯಲ್ಲೂ ಹಾರ ನೇತಾಡುತ್ತಿದೆ. ಅದೊಂದು ಅಸಂಪ್ರದಾಯಿಕ ಮದುವೆಯೆಂದು ಯಾರಿಗಾದರೂ ಗೊತ್ತಾಗುತ್ತದೆ. ನಾವೂ ಒಂದಿಷ್ಟು ಸಣ್ಣ ಕುತೂಹಲದಿಂದ ಅಲ್ಲಿ ನಿಂತಿದ್ದೆವು. ನನಗೇಕೋ ಆ ಮದುಮಗಳ ಏಕಾಂಗಿತನ ಒಂದಿಷ್ಟು ವಿಷಾದವನ್ನು ತರುತ್ತಿತ್ತು. ಅವಳಿಗೆ ತಾಯಿ ಇರಬಹುದು. ಅಕ್ಕ ತಂಗಿಯರಿರಬಹುದು, ಗೆಳತಿಯರಿರಬಹುದು. ಆದರೂ ಇಲ್ಲಿ ಏಕಾಂಗಿಯಾಗಿ ಹೊಸಬಾಳಿಗೆ ಪ್ರವೇಶಿಸುತ್ತಿದ್ದಾಳೆ. ಅವಳಿಗೆ ಈ ಎಲ್ಲವೂ ಆಗುವವನೇ ಈ ಕೈಹಿಡಿದಾತ ಎನ್ನುವ ಚಿಂತೆ! ಮದುಮಗನ ಗೆಳೆಯರ ಕೈಯ್ಯಲ್ಲಿ ಒಂದಿಷ್ಟು ಕಾಗದ ಪತ್ರವಿತ್ತು. ಅವರಾಗಲೇ ರಿಜಿಸ್ಟರ್ ಮದುವೆ ಮುಗಿಸಿ ದೇವಸ್ಥಾನದಲ್ಲಿ ಪುರೋಹಿತರ ಸಮಕ್ಷಮದಲ್ಲಿ ಮತ್ತೊಂದು ಮದುವೆಯ ಮುದ್ರೆಯೊತ್ತುತ್ತಿದ್ದರು. ಈ ಪ್ರೇಮ ವಿವಾಹಗಳೂ ಎಷ್ಟು ವಿಚಿತ್ರ! ಕಾನೂನು ಬದ್ಧವಾಗಿ ಮದುವೆ ಆದರೆ ಸಾಲದೇ? ತಾಳಿ ಕಟ್ಟುವಿಕೆ, ಹಾರ ಬದಲಾಯಿಸುವಿಕೆ, ಪುರೋಹಿತರ ಮಂತ್ರ ಎಲ್ಲವೂ ಏಕೆ ಅನಿವಾರ್ಯವಾಗುತ್ತದೋ ಈ ಯುವ ಪೀಳಿಗೆಗೆ ?!

ನಾವು ಹೋಗುವ ವೇಳೆಗೆ ತಾಳಿ, ಹಾರಗಳ ಸಂಭ್ರಮ ಮುಗಿದು ದೇವರಿಗೆ ನವ ವಧುವರರ ಹೆಸರಿನಲ್ಲಿ ಅರ್ಚನೆಯಾಗುತ್ತಿತ್ತು. ಅರ್ಚನೆ ತೀರ್ಥ ಪ್ರಸಾದಗಳ ವಿನಿಯೋಗದ ನಂತರ ನಾಲ್ಕೂ ಮೂಲೆಗೂ ಅರಿಶಿನ ಹಚ್ಚಿದ ಕಾಗದಕ್ಕೆ ಸಹಿಹಾಕಲು ಪುರೋಹಿತರನ್ನು ಕೇಳಿದರು. ಹಳ್ಳಿಯ ಪುರೋಹಿತರು ಇಂಥ ಜಂಜಾಟದಲ್ಲಿ ಬೀಳಲು ಭಯ. ಪತ್ರವನ್ನು ಓದಿದರು. ಅದರಲ್ಲಿ ಕೊನೆಯಲ್ಲಿ ಸಾಕ್ಷಿ ಒಂದು, ಸಾಕ್ಷಿ ಎರಡು ಎಂದು ನಮೂದಿಸಲಾಗಿತ್ತು. ''ಇಲ್ಲಿ ಎರಡು ಸಾಕ್ಷಿದಾರರನ್ನು ನಮೂದಿಸಿದ್ದೀರಿ ಒಂದನೇ ಸಾಕ್ಷಿಗೆ ಯಾರ ಹತ್ತಿರವಾದರೂ ಸಹಿ ಮಾಡಿಸಿ, ಎರಡನೇ ಸಾಕ್ಷಿಗೆ ನಾನು

ಸಹಿಮಾಡುತ್ತೇನೆ'' ಎಂದರು. ಹುಡುಗರಿಗೆ ಪೇಚಾಟವಾಯಿತು. ಅಲ್ಲಿದ್ದವರು ಅವರ ಗುಂಪು ಬಿಟ್ಟರೆ ನಾನು ಮತ್ತು ನನ್ನ ನೆಂಟ! ''ಇವರು ಯಾವ ಊರಿನ ಹುಡುಗರೂಈ ಆ ಹುಡುಗಿ ಪ್ರಾಪ್ತಳೋ ಅಪ್ರಾಪ್ತಳೋ ಇವೆಲ್ಲ ತಾಪತ್ರಯ ನನಗ್ಯಾಕೆ, ನಾನು ಸರ್ಕಾರಿ ನೌಕರ'' ಎಂದು ಜಾರಿಕೊಂಡರು. ಇನ್ನುಳಿದುದು ನನ್ನ ಸರದಿ. ಹಾಗೆ ನೋಡಿದರೆ ನನಗೆ ಹೆದರುವ ಅಗತ್ಯವೇ ಇರಲಿಲ್ಲ. ಅವರಾಗಲೇ ತೀರ್ಥಹಳ್ಳಿಯ ರಿಜಿಸ್ಟರ್ ಆಫೀಸಿನಲ್ಲಿ ತಮ್ಮ ವಿವಾಹ ನೋಂದಾಯಿಸಿದ್ದರು. ಆದರೂ ಆ ಯುವ ಉತ್ಸಾಹಕ್ಕೆ ಪುರೋಹಿತರ, ಸಾಕ್ಷಿಗಳ, ಸಹಿ ಅಗತ್ಯವಾಗಿತ್ತು.ನಾನು ಅವರ ವಿವಾಹ ನೋಂದಣಿ ಪತ್ರ ನೋಡಿದೆ. ಹುಡುಗಿಯನ್ನು ಪಕ್ಕಕ್ಕೆ ಕರೆದು 'ಖಂಡಿತಾ ನಿನಗೆ 20 ವರ್ಷ?'' ಎಂದೆ ಅದುವರೆವಿಗೂ ಅನಾಥ ಪ್ರಜ್ಞೆಯಿಂದ ಬಳಲುತ್ತಿದ್ದ ಹುಡುಗಿ ಒಮ್ಮೆಲೇ ಅಳಲು ಪ್ರಾರಂಭಿಸಿದಳು. ನನಗೆ ಗೊಂದಲವಾಯಿತು. 'ಇದು ಬಲವಂತದ ಮದುವೆಯೇ' ಎಂದು! ಅವಳ ದುಃಖದ ಭಾರ ಇಳಿದ ಮೇಲೆ, ತನ್ನ ತಾಯಿಯ ನೆನಪಿನಿಂದ ಅತ್ತಿದ್ದಾಗಿ ಹೇಳಿ, ಹೊಸಬದುಕಿನಲ್ಲಿ ತನ್ನ ಉದ್ಯೋಗದ ಅಗತ್ಯವನ್ನು ಅರಿತು ತಾನು ತಂದಿದ್ದ S.S.L.C ಮತ್ತು ಪದವಿ ಸರ್ಟಿಫಿಕೇಟ್‌ಗಳನ್ನು ತೋರಿಸಿದಳು. ನೆಮ್ಮದಿಯಾಗಿ ಸಹಿಮಾಡಿದೆ. ಹುಡುಗರು 'ಥ್ಯಾಂಕ್ಸ್ ಆಂಟಿ' ಎಂದು ಆಂಟಿ ನೆಂಟಸ್ಥಿಕೆ ನನ್ನ ಮೇಲೆ ಹೇರಿ ಮರೆಯಾದರು. ಅಯಾಚಿತವಾಗಿ ಒಂದು ಮದುವೆಗೆ ಎಲ್ಲರೀತಿಯಲ್ಲಿ 'ಸಾಕ್ಷಿ'ಯಾಗಿದ್ದೆ.

ಅದೇ ಹುಡುಗಿ ಈಗ ನನ್ನ ಮುಂದೆ ಮಗುವಿನೊಂದಿಗೆ ನಿಂತಿದ್ದಾಳೆ. ತನ್ನ ಮುಂದಿನ ಕಥೆಯನ್ನು ನಿರ್ಭಾವದಿಂದ ಉಸುರುತ್ತಿದ್ದಾಳೆ. ಅಂದು ಕಟ್ಟಿಕೊಂಡ ಗಂಡ ತನ್ನ ಹೆತ್ತವರ ಒತ್ತಾಯಕ್ಕೆ ಮಣಿದು ಒಂದೇ ವರ್ಷದಲ್ಲಿ ಇವಳನ್ನು ಬಿಟ್ಟು ಹಳ್ಳಿಗೆ ಓಡಿಹೋದ! ಆ ಗಂಡನ ಗೆಳೆಯನ ಜೊತೆ ಇವಳು ಬೆಂಗಳೂರಿನಲ್ಲಿ ಬಾಳುತ್ತಿದ್ದಾಳೆ. ಅವಳ ಬುದ್ಧಿವಂತಿಕೆಯ ಕಾರಣದಿಂದ ಬ್ಯಾಂಕ್‌ನಲ್ಲಿ ಕೆಲಸ ಸಿಕ್ಕು ಬದುಕಿಗೆ ಆರ್ಥಿಕ ಭದ್ರತೆ ಒದಗಿದೆ. ಈ ಗೆಳೆಯನೂ ಯಾವಾಗ ಓಡುತ್ತಾನೋ ಗೊತ್ತಿಲ್ಲ. ಆದರೂ ಅವಳಿಗೆ ತನ್ನ ಮಗಳನ್ನು ಸಾಕುವ ಕನಸುಗಳಿವೆ. ಗತ್ತುಗಾರಿಕೆಯೂ ಇದೆ. ''ನಾವು ಐದು ವರ್ಷಗಳು ಪ್ರೀತಿಸಿ ಮದುವೆಯಾದೆವು ಆಂಟಿ. ಇವ ಇಷ್ಟು ಮೋಸ ಎಂದು ತಿಳಿಯಲೇ ಇಲ್ಲ'' ಎನ್ನುವ ಅವಳ ಮಾತುಗಳು ನನ್ನನ್ನು ಚಿಂತೆಗೆ ಹಚ್ಚುತ್ತವೆ. ಪ್ರೇಮ ವಿವಾಹ ಮಾಡಿಕೊಳ್ಳುವುದು ತಪ್ಪಲ್ಲ. ಆದರೆ ವಿವಾಹದ ನಂತರದ ಬದುಕಿಗೆ ಅಗತ್ಯವಾದ ಆರ್ಥಿಕ ಭದ್ರತೆಯ ಬಗ್ಗೆ ಮತ್ತು ಒಬ್ಬರಿಗೊಬ್ಬರು ನಿಷ್ಠರಾಗಿ ಉಳಿಯುವ ಬಗ್ಗೆ ಪ್ರೌಢ ಚಿಂತನೆಯನ್ನು ಪ್ರೇಮ ಅಮರ ಎನ್ನುವ ಸಂದೇಶ ಕೊಡುವುದಿಲ್ಲ. ಯೌವನದ ಹಸಿಬಿಸಿ ಪ್ರೇಮಗಳಲ್ಲಿ ಸಂಕಷ್ಟಕ್ಕೆ ಗುರಿಯಾಗುವವಳು ಹೆಣ್ಣು ಎನ್ನುವುದನ್ನು ಗಮನಿಸಿದಾಗ ಬೇಸರವಾಗುತ್ತದೆ. ಆ ಮದುವೆಯ ದಿನ ನಾನು ಹುಡುಗಿಯ ವಯಸ್ಸು ಗಮನಿಸಲು ತೋರಿಸಿದ ಕಾಳಜಿ, ಹುಡುಗನ ಪ್ರೇಮಬದ್ಧತೆಯನ್ನು ಪರೀಕ್ಷಿಸಲು ತೋರಲಿಲ್ಲವಲ್ಲವೆನಿಸಿ, ಎಂಥ ಮದುವೆಗೆ ನಾನು ಸಾಕ್ಷಿಯಾದೆ ಎಂದು ಮನಸ್ಸು ಭಾರವಾಗುತ್ತದೆ.

**-ಶತಾಭಿಷಾ**

---

'ಆಂಗ್ಲ ಸಂಸ್ಕೃತಿಯಿಂದ ಪ್ರಭಾವಿತರಾದ ಮಕ್ಕಳು ಆಂಗ್ಲ ಸಂಸ್ಕೃತಿಯ ಹಾವಭಾವಗಳನ್ನು ಕಲಿಯುವುದರೊಂದಿಗೆ ಆಂಗ್ಲ ಸಂಸ್ಕೃತಿಯ ಸಂಕೇತಗಳನ್ನು ಪಠ್ಯಕ್ರಮದ ಜೊತೆಗೆ ದಿನನಿತ್ಯ ಉಪಯೋಗಿಸುವ ವಸ್ತುಗಳಲ್ಲೂ ಪ್ರತಿಬಿಂಬಿಸುವಂತೆ ನೋಡಿಕೊಳ್ಳಲಾಗುತ್ತದೆ. ಮಕ್ಕಳು ಪ್ರತಿದಿನ ಉಪಯೋಗಿಸುವ ಮಕ್ಕಳ ಕಥೆ ಪುಸ್ತಕ, ವ್ಯಂಗ್ಯ ಚಿತ್ರದ ಪುಸ್ತಕಗಳು, ವಿಡಿಯೋ ಚಿತ್ರಗಳು, ಪುಸ್ತಕದ ಚೀಲ, ಊಟದ ಡಬ್ಬಿ, ನೀರಿನ ಬಾಟಲ್, ರಬ್ಬರ್, ಪೆನ್ಸಿಲ್ ಇತ್ಯಾದಿಗಳ ಮೇಲೆ ಅಚ್ಚಾದ ಸ್ಟಿಕ್ಕರ್‌ಗಳು ಹಾಗೂ ಚಿತ್ರಗಳು ಸತತವಾಗಿ ಮಕ್ಕಳನ್ನು ಪಾಶ್ಚಿಮಾತ್ಯ ಸಂಸ್ಕೃತಿಯೊಂದಿಗೆ ಸಂಪರ್ಕ ಹೊಂದಿರುವಂತೆ ಮಾಡುವುದನ್ನು ನೋಡುತ್ತೇವೆ. ಎಷ್ಟರ ಮಟ್ಟಿಗೆ ಈ ಶಾಲೆಗಳು ಇಂಗ್ಲೀಷ್‌ನ ನವಸಾಹತುಶಾಹಿ ಸಂಸ್ಕೃತಿಯನ್ನು ಮಕ್ಕಳ ಮನದಲ್ಲಿ ಭಟ್ಟಿ ಇಳಿಸುತ್ತವೆ ಎನ್ನುವುದು ಶಾಲೆಯ ಆರ್ಥಿಕ ಸಾಮಾಜಿಕ ಮಟ್ಟದ ಮೇಲೆ ನಿರ್ಧಾರವಾಗುತ್ತದೆ.'

'ಕೃಪೆ : ಜನ ವಿಮುಕ್ತಿ

## ನಿರಂತರ ಪ್ರಗತಿಗೆ ನಿರ್ಣಾಯಕ ಕ್ರಮಗಳು

ರಾಜ್ಯದ ಸರ್ವತೋಮುಖ ಪ್ರಗತಿಗೆ ಉತ್ತಮ ಶಿಕ್ಷಣ ಅಡಿಪಾಯ. ಅಂತೆಯೆ ಶಿಕ್ಷಣ ಅಭಿವೃದ್ಧಿಗೆ ಪ್ರಾಥಮಿಕ ಆದ್ಯತೆ. ಪ್ರಾಥಮಿಕ ಶಿಕ್ಷಣ ಕಡ್ಡಾಯ ಸರ್ಕಾರದ ಗುರಿ. ಬಾಲಕಿಯರ ಶಿಕ್ಷಣಕ್ಕೆ ಒತ್ತು. ಜಿಲ್ಲಾ ಶಿಕ್ಷಣ ಕಾರ್ಯಕ್ರಮ ಬೆಳಗಾವಿ, ಕೋಲಾರ, ಮಂಡ್ಯ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಪ್ರಾರಂಭ. ಎರಡನೇ ಹಂತದಲ್ಲಿ ಇನ್ನೂ ಐದು ಜಿಲ್ಲೆಗಳ ಸೇರ್ಪಡೆ. ಸೆಕೆಂಡರಿ ಶಿಕ್ಷಣ ವ್ಯವಸ್ಥೆ ಬಲವರ್ಧನೆಗೆ ಕ್ರಮ.

ಶಾಲೆಗಳೇ ಇಲ್ಲದ 1264 ಊರುಗಳಲ್ಲಿ ಶಾಲೆಗಳ ಪ್ರಾರಂಭ. ಒಟ್ಟು 18,650 ಪ್ರಾಥಮಿಕ ಶಿಕ್ಷಕರ ನೇಮಕಾತಿ. ಒಂದು ಸಾವಿರ ಪ್ರಾಥಮಿಕ ಶಾಲಾ ಕೊಠಡಿಗಳ ನಿರ್ಮಾಣಕ್ಕೆ ರೂ. 40.00 ಕೋಟಿ ವೆಚ್ಚ. ಸುಮಾರು 42 ಲಕ್ಷ ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕ ಹಾಗೂ 48 ಲಕ್ಷ ಶಾಲಾ ಮಕ್ಕಳಿಗೆ ಉಚಿತ ಸಮವಸ್ತ್ರ ವಿತರಣೆ. ಮೈಸೂರಿನಲ್ಲಿ ಮುಕ್ತ ವಿಶ್ವವಿದ್ಯಾನಿಲಯ ಪ್ರಾರಂಭಿಸಲು ಕ್ರಮ.

''ಉತ್ತಮ ವಿದ್ಯಾಭ್ಯಾಸ-ಪ್ರಗತಿಗೆ ಅವಶ್ಯಕ''

ಕರ್ನಾಟಕ ವಾರ್ತೆ

# ಮನವಿ

ಕಳೆದ ಹನ್ನೊಂದು ವರ್ಷಗಳಿಂದ ನಿರಂತರವಾಗಿ ನಡೆದುಬರುತ್ತಿರುವ ಪತ್ರಿಕೆಯಾದ 'ಅಚಲ' ಮಹಿಳಾ ಜಾಗೃತಿಯ ಧ್ಯೇಯಕ್ಕೆ ಬದ್ಧವಾಗಿರುವ ದ್ವೈಮಾಸಿಕ. ಕರ್ನಾಟಕದ ಎಲ್ಲ ಭಾಗಗಳಲ್ಲಿ ನಮ್ಮ ಚಂದಾದಾರರಿದ್ದಾರೆ; ನಾಡಿನ ಅನೇಕ ಹಿರಿಯ, ಕಿರಿಯ ಚಿಂತಕರು, ವಿಚಾರವಂತರು, ಸಾಹಿತಿಗಳು ಅಭಿಮಾನವಿಟ್ಟು ನಮ್ಮ ಪತ್ರಿಕೆಗೆ ಲೇಖನಗಳನ್ನು ಬರೆದು ಕೊಟ್ಟಿದ್ದಾರೆ, ಕೊಡುತ್ತಿದ್ದಾರೆ. ಹೀಗಾಗಿ ಆರಂಭದಿಂದ ಇಂದಿನವರೆಗೆ ಒಂದು ಉನ್ನತ ಮಟ್ಟದ ವೈಚಾರಿಕ ಲೇಖನಗಳನ್ನು, ಸಂಶೋಧನಾ ವರದಿಗಳನ್ನು ಹಲವು ಸಾಮಾಜಿಕ ಸಮಸ್ಯೆಗಳ ಚರ್ಚೆಯನ್ನು ಮಹಿಳೆಯರ ದೃಷ್ಟಿಯಿಂದ ನಾವು ಪ್ರಕಟಿಸುತ್ತಾ ಬಂದಿದ್ದೇವೆ.

ಆದರೆ ಧ್ಯೇಯಬದ್ಧ ಮಹಿಳಾ ಪತ್ರಿಕೆಗಳೇ ಅಭಾವವಾಗಿರುವ ಈ ನಾಡಿನಲ್ಲಿ 'ಅಚಲ' ದಂಥ ಪತ್ರಿಕೆಗೆ ಎಷ್ಟು ಪ್ರೋತ್ಸಾಹ ದೊರೆಯಬೇಕೋ ಅದು ಇದುವರೆಗೂ ದೊರೆತಿಲ್ಲ. ಚಂದಾಹಣವಲ್ಲದೆ ಬೇರೆ ಯಾವ ಆದಾಯಗಳೂ ನಮ್ಮ ಪತ್ರಿಕೆಗೆ ಇಲ್ಲ. ಆದ್ದರಿಂದ ಓದುಗರಲ್ಲಿ ನಾವು ವಿನಮ್ರವಾಗಿ ಭಿನ್ನವಿಸಿಕೊಳ್ಳುವುದೇನೆಂದರೆ **ದಯವಿಟ್ಟು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ನಮ್ಮ ಪತ್ರಿಕೆಗೆ ಚಂದಾದಾರರಾಗಿರಿ. ಈಗಾಗಲೇ ಚಂದಾದಾರರಾಗಿರುವವರು ದಯವಿಟ್ಟು ನವೀಕರಿಸಿರಿ. ಮಹಿಳಾ ಪ್ರಗತಿಯಲ್ಲಿ ಕಳಕಳಿ ಹೊಂದಿರುವ ದಾನಿಗಳು ಉದಾರವಾಗಿ ದಾನನೀಡುವ ಮೂಲಕ ಈ ಪತ್ರಿಕೆ ಸದಾ ಉಳಿದು ಬರುವಂಥ 'ಸ್ಥಾಯಿನಿಧಿ' ಸ್ಥಾಪನೆಗೆ ನೆರವಾಗಬೇಕೆಂದು ಕೋರುತ್ತೇವೆ.**

- ಸಂಪಾದಕ ಮಂಡಳಿ

**Reg. No. MAG (5) PRC, DEGL 036/89/87**
BOOK POST/Periodicals

To,
Sri / Smt.

*If Undelivered please return to :*
**Jagruthi Mahila Adhyayana Kendra**
401, Vijay Tower, 2nd Main, RPC Layout
Vijayanagar, II Stage, Bangalore-560 040.

**ACHALA** - Edited by N. Gayathri, Published by Dr. G. Ramakrishna on behalf of Jagruthi Mahila Adhyayana Kendra, 26, 1st Main Road, Vyalikaval, Bangalore-03. Typeset & Printing by **AKSHARA PRINTERS**, B'lore-4. Ph.: 624082